## ಕನ್ನಡ ವಿಶ್ವವಿದ್ಯಾಲಯ, ಹಂಪಿ



ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

# "ಅಕ್ಕಮಹಾದೇವಿ - ಹೆಳವನಕಟ್ಟೆ ಗಿರಿಯಮ್ಮ ತೌಲನಿಕ ಅಧ್ಯಯನ"


ಸಂಶೋಧನಾ ವಿದ್ಯಾರ್ಥಿ : ರಾಘವೇಂದ್ರ ಬಿ.ಎ
ನೋಂದಣಿ ಸಂಖ್ಯೆ: ಕೆಎಸ್‌ಪಿಬಿಕೆಎಸ್‌೦೦೬೫೩

ಮಾರ್ಗದರ್ಶಕರು : ಡಾ॥ ಶೀಲಾದೇವಿ ಎಸ್ ಮಳೀಮಠ,
ಸಹ ಪ್ರಾಧ್ಯಾಪಕರು,
ಬಿ.ಎಂ.ಎಸ್ ಮಹಿಳಾ ವಿದ್ಯಾಲಯ,
ಬಸವನಗುಡಿ, ಬೆಂಗಳೂರು-೫೬೦೦೦೪





[illegible]ತಾ ಸಂಸ್ಥೆ : ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ,
ಬೆಂಗಳೂರು-೫೬೦೦೧೮

# ಕನ್ನಡ ವಿಶ್ವವಿದ್ಯಾಲಯ, ಹಂಪಿ



ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

# "ಅಕ್ಕಮಹಾದೇವಿ - ಹೆಳವನಕಟ್ಟೆ ಗಿರಿಯಮ್ಮ ತೌಲನಿಕ ಅಧ್ಯಯನ"

ಸಂಶೋಧನಾ ವಿದ್ಯಾರ್ಥಿ:-

ರಾಘವೇಂದ್ರ ಬಿ.ಎ
ನೋಂದಣಿ ಸಂಖ್ಯೆ: ಕೆವಿಎಸ್‌ಪಿಬಿಕೆಎಸ್೦೦೬೫೩

ಮಾರ್ಗದರ್ಶಕರು:-

ಡಾ॥ಶೀಲಾದೇವಿ ಎಸ್ ಮಳೀಮಠ,
ಸಹ ಪ್ರಾಧ್ಯಾಪಕರು,
ಬಿ.ಎಂ.ಎಸ್ ಮಹಿಳಾ ವಿದ್ಯಾಲಯ,
ಬಸವನಗುಡಿ, ಬೆಂಗಳೂರು-೫೬೦೦೦೪

ಮಾನ್ಯತಾ ಸಂಸ್ಥೆ:-

ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ,
ಬೆಂಗಳೂರು-೫೬೦೦೧೮

# ಪ್ರಮಾಣಪತ್ರ

**'ಅಕ್ಕ ಮಹಾದೇವಿ-ಹೆಳವನಕಟ್ಟೆ ಗಿರಿಯಮ್ಮ ತೌಲನಿಕ ಅಧ್ಯಯನ'** ಎಂಬ ನಿಬಂಧವನ್ನು ಎಂಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಸಲ್ಲಿಸಲು ಡಾ॥ ಶೀಲಾದೇವಿ ಎಸ್ ಮಳೀಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರೀಸುತ್ತೇನೆ.

ದಿನಾಂಕ: 30.07.2013

ಸ್ಥಳ: ಬೆಂಗಳೂರು

ಸಹಿ/-

ರಾಘವೇಂದ್ರ ಬಿ.ಎ
ಸಂಶೋಧನಾ ವಿದ್ಯಾರ್ಥಿ,
ಬೆಂಗಳೂರು

# ದೃಢೀಕರಣ ಪತ್ರ

**ರಾಘವೇಂದ್ರ ಬಿ ಎ** ರವರು ಎಂಫಿಲ್ ಪದವಿಗಾಗಿ ಬರೆದು ಸಿದ್ದಪಡಿಸಿರುವ **'ಅಕ್ಕಮಹಾದೇವಿ-ಹೆಳವನಕಟ್ಟೆ ಗಿರಿಯಮ್ಮ ತೌಲನಿಕ ಅಧ್ಯಯನ'** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ ಪರ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರೀಸಿರುತ್ತೇನೆ.

ದಿನಾಂಕ: 30-07-2013
ಸ್ಥಳ: ಬೆಂಗಳೂರು.

ಸಹಿ/-

ಶೀ ಮಳೀಮಠ

**ಮಾರ್ಗದರ್ಶಕರು**
**ಡಾ॥ಶೀಲಾದೇವಿ ಎಸ್ ಮಳೀಮಠ**
ಸಹ ಪ್ರಾಧ್ಯಾಪಕರು
ಬಿ.ಎಂ.ಎಸ್ ಮಹಿಳಾ ವಿದ್ಯಾನಿಲಯ
ಬಸವನಗುಡಿ
ಬೆಂಗಳೂರು-೫೬೦ ೦೦೪

# ಪರಿವಿಡಿ

# ಅಧ್ಯಾಯ–೧
## ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

**೧.ಪೀಠಿಕೆ:–**

ಕೀಡಿ ತುಂಬಿಯಾ ಹಂಬಲದಿಂದಾಗಿ ತುಂಬಿಯಾಗಿ
ತನ್ನ ಬಿಡಲುಂಟೆ ಅಯ್ಯಾ?
ಅನು ನಿಮ್ಮ ನೆನೆದು ಎನ್ನ ಕರೆತುಂಬಿ
ಎನ್ನ ಮನತುಂಬಿ ಎನ್ನ ಭಾವ ತುಂಬಿ
ಮತ್ತಿಲ್ಲದೆ ನಿನ್ನ ಕೂಟದ ಸವಿಗತಿಯೆನೆಂತು
ಕಾಣುವೆನಯ್ಯಾ ಚೆನ್ನಮಲ್ಲಿಕಾರ್ಜುನಾ? (ಮ ಸ ೧೬೫, ಕ,ಮ,ಸಾ,ಚರಿತ್ರೆ)

–ಅಕ್ಕಮಹಾದೇವಿ

ದೈವಿತತ್ವದೊಂದಿಗೆ ಒಂದಾಗುವ ಪರಿಣಾಮ ಸುಖದ ಅಪೇಕ್ಷೆಯನ್ನು ವ್ಯಂಜಕಗೊಳಿಸುವಲ್ಲಿ 'ತುಂಬಿ' ಪದದ ವಿಭಿನ್ನ ಅರ್ಥ ಸಾಧ್ಯತೆಗಳನ್ನು ದುಡಿಸಿಕೊಂಡಿರುವ ಕಲೆಗಾರಿಕೆ ಮಾರ್ಮಿಕವಾಗಿದೆ.

ಭಕ್ತಿಭಂಡಾರಿಯಾದ ಅಕ್ಕಮಹಾದೇವಿಯು ದೈವತ್ವದ ನೆಲೆಯ ಬಗ್ಗೆ ಸಾಂಸಾರಿಕ ವ್ಯಾಮೋಹದಲ್ಲಿ ನಾಶಹೊಂದುವ ಅಳಿಮನದ ಆರ್ತತೆ, ಅಸಹಾಯಕತೆ, ಆಧ್ಯಾತ್ಮಿಕತೆಯ ವಿವರಣೆ, ಅಲೌಕಿಕ ವಿಚಾರಗಳು ಹಾಗೂ ದುರಂತದ ಭಾವ ಸಂಚಲನಗಳನ್ನು ತಿಳಿಯಲು ಅಕ್ಕನ ವಚನಗಳು ನನ್ನನ್ನು ಪ್ರೇರೇಪಿಸಿದವು. ೧೨ನೇ ಶತಮಾನದಲ್ಲಿ ಅಕ್ಕಮಹಾದೇವಿ, ೧೮ನೇ ಶತಮಾನದಲ್ಲಿ ಹೆಳವನಕಟ್ಟೆ ಗಿರಿಯಮ್ಮ ರವರ ವಚನಗಳು ಮತ್ತು ಕೀರ್ತನೆಗಳು ಜನ ಸಾಮಾನ್ಯರ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರಿದವು ಹಾಗೂ ಭಕ್ತಿಯ ಅನುಸಂಧಾನದೊಂದಿಗೆ ಸಮಾಜ ಸಾಂಸ್ಕೃತಿಕ ಕಟ್ಟುವಿಕೆಗೂ ಆಯಾಮ ಒದಗಿಸಿದವು ಎಂಬುದನ್ನು ತಿಳಿಯಲು ಈ ಅಧ್ಯಯನ ಅವಶ್ಯಕವಾಗಿದೆ ಎಂದೆನಿಸಿತು, ಹೀಗಾಗಿ ಈ ತೌಲನಿಕ ಅಧ್ಯಯನವನ್ನು ಆಯ್ಕೆ ಮಾಡಿಕೊಂಡೆನು.

ಯಾಕೆನ್ನ ಬ್ರಹ್ಮ ಪುಟ್ಟಿಸಿದನೂ ಸೃಷ್ಟಿಸಿದನೂ
ಮಾತಿನ್ನಾಕೆ ಪಡೆದಳೂ
ಸಾಕಿನ್ನು ಹೆಣ್ಣು ಜನ್ಮದ ಬಾಳು
ಯಾಕೆ ಹೇಳು ತಾಕಲೆನ್ನಯ ಗೋಳು (ಮ ಸ ೧೯೪,ಕ ಮ ಸಾ ಚರಿತ್ರೆ)

–ಹೆಳವನಕಟ್ಟೆ ಗಿರಿಯಮ್ಮ

ಹೆಳವನಕಟ್ಟೆ ಗಿರಿಯಮ್ಮ ಹೆಣ್ಣಾಗಿ ಹುಟ್ಟಿ ಎದುರಿಸಿದ ಸಮಸ್ಯೆಗಳನ್ನು, ಅನುಭವಿಸಿದ ನೋವು ವಿಷಾದಗಳು ವೈಯಕ್ತಿಕತೆಯನ್ನು ಕಳೆದುಕೊಂಡು ಹೇಗೆ ಸಾರ್ವತ್ರಿಕತೆಯನ್ನು ಪಡೆದುಕೊಳ್ಳುತ್ತದೆ ಎಂಬುದನ್ನು ಗಿರಿಯಮ್ಮನ ಕೀರ್ತನೆಗಳಲ್ಲಿ ತಿಳಿಯಬಹುದು.

**೨ ಅಧ್ಯಯನದ ಉದ್ದೇಶ:-**

ಈವರೆಗಿನ ಸಾಹಿತ್ಯ ಚರಿತ್ರೆಗಳು ಮಹಿಳಾ ಸಾಹಿತಿಗಳನ್ನು ಅವರ ಕೃತಿಗಳನ್ನು ಪ್ರಸ್ತಾಪಿಸುವಲ್ಲಿ ವಸ್ತುನಿಷ್ಠವಾಗಿ ಚಿಂತಿಸಿದೆಯೇ ಅಥವಾ ಸಾಮಾಜಿಕ ರೂಢಿಯ ಲಿಂಗತಾರತಮ್ಯ ಧೋರಣೆ ವಿದ್ವತ್ತಿನ ವಲಯವನ್ನು ಪ್ರಭಾವಿಸಿದೆಯೇ ಎಂಬ ಮಹಿಳಾ ಅಧ್ಯಯನಕಾರರನ್ನು ಕಾಡಿಸುವಂತಿದೆ. ಏಕೆಂದರೆ ದೀರ್ಘ ಪರಿಶ್ರಮ ಹಾಗೂ ಉನ್ನತ ಪಾಂಡಿತ್ಯಗಳ ಪ್ರತಿಫಲವಾಗಿ ಸೃಷ್ಟಿಗೊಂಡ ಈ ಸಾಹಿತ್ಯ ಚರಿತ್ರೆಗಳಲ್ಲಿ ಮಹಿಳಾ ಸಾಹಿತಿಗಳ ಮತ್ತು ಅವರ ಕೃತಿಗಳ ಪ್ರಸ್ತಾಪ ಬಂದಿರುವುದು ತೀರಾ ನಗಣ್ಯ ಪ್ರಮಾಣದಲ್ಲಿ. ಮಹಿಳೆಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದೂ ಇಲ್ಲವೇನೂ ಎಂಬಂತೆ, ಮಹಿಳೆಗೆ ದತ್ತವಾಗುವ ತಾರತಮ್ಯದ ಸಾಮಾಜಿಕ ಸಂದರ್ಭದಲ್ಲಿ ಅವಳ ಸೃಜನ ಶೀಲತೆಯೇ ಪ್ರಶ್ನಾರ್ಹವಾಗಿ ಬಿಡುವುದು ಸಾಧ್ಯ, ಜನಪದ ಮತ್ತಿತರ ಸಾಹಿತ್ಯದ ಮೂಲ ಚೇತನ ಸ್ವರೂಪ ಮಹಿಳೆಯೇ ಎಂಬುದನ್ನು ವಿದ್ವಾಂಸರು ಗುರ್ತಿಸುತ್ತಿದ್ದಾರೆ. ಮಹಿಳಾ ಸಾಹಿತ್ಯ ಎಂಬುದಕ್ಕೆ ಅಸ್ತಿತ್ವ ಇದೆಯೇ, ಇದ್ದರೆ ಅದನ್ನು ಸಾಬೀತು ಪಡಿಸುವ ಮಾಹಿತಿ ದಾಖಲೆಗಳು? ಏನಾದವು ಎಂಬುವ ಪ್ರಶ್ನೆಗಳನ್ನು, ಅದಕ್ಕೆ ಅರ್ಹ ಉತ್ತರಗಳನ್ನು ಅಕ್ಕನ ವಚನಗಳು, ಗಿರಿಯಮ್ಮನ ಕೀರ್ತನೆಗಳಿಂದ ಹುಡುಕುವ ಸಲುವಾಗಿ, ಮಹಿಳಾ ಸಾಹಿತ್ಯಕ್ಕೆ ಸೂಕ್ತ ಸ್ಥಾನ ಮಾನ ನೀಡುವ ವಿಚಾರವಾಗಿ, ಸೃಜಶೀಲತೆಯ ಲೋಕೊದ್ಧಾರ ಮಾಡಲು, ಪುರುಷ ಚಿಂತನೆಯನ್ನು ಮುಖಾಮುಖಿಯಾಗಿಸುವ ಸಲುವಾಗಿ ಈ ಅಧ್ಯಯನವನ್ನು ವಚನ-ಕೀರ್ತನೆಗಳ ಮೂಲಕ ಸ್ಪಷ್ಟೀಕರಿಸಲು ಪ್ರಯತ್ನಿಸಲಾಗುವುದು.

ಸಮಾಜದ ದಿವ್ಯ ನಿರ್ಲಕ್ಷದಿಂದಾಗಿ ಮಹಿಳಾ ಸಾಹಿತಿಗಳು ಸಂಶೋಧನೆಯ ಅಂಚಿನಿಂದ ಹೊರಗುಳಿಯುವ ಸಂಭವ ಇರುತ್ತದೆ. ಚೌಕಟ್ಟಿನ ವ್ಯಾಪ್ತಿಯಿಂದ ಹೊರಬಂದು ಸಮಾಜದಲ್ಲಿ ಉತ್ತಮ ಸ್ಥಾನಮಾನ ಹೊಂದಲು ಅವಕಾಶ ಕೊಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಸಂಶೋಧನೆಗಳು ನಡೆಯಬೇಕಾದ ಅನಿವಾರ್ಯವಿದೆ.

**೩. ಅಧ್ಯಯನದ ವ್ಯಾಪ್ತಿ:-**

ಈ ಅಧ್ಯಯನದ ಇತಿ ಮಿತಿಗಳು, ಸೃಜಶೀಲತೆ ಅಭಿವ್ಯಕ್ತಿಗಾಗಿ ಮಹಿಳೆಯರು ಸಾಹಿತ್ಯ ಮಾರ್ಗವನ್ನು ಅನುಸರಿಸಿದರು ಎಂಬುದಾಗಿ ಸುಲಭವಾಗಿ ಕಾಣಿಸುವಂತದ್ದಲ್ಲ, ಒಪ್ಪಬೇಕಾದ್ದಲ್ಲ. ಇದಕ್ಕೆ ಸಾಕ್ಷಿ ಕುರುಹುಗಳನ್ನು ಒದಗಿಸಬೇಕಾದುದ್ದು ಸಂಶೋಧನೆಯ ಪ್ರಯತ್ನ. ಮಹಿಳಾ ಸಾಹಿತ್ಯಕ್ಕೆ **'ಪರಂಪರೆ'** ಇದೆಯೇ ಎಂಬ ಪ್ರಶ್ನೆಯನ್ನು ಗುರಿಯಾಗಿಟ್ಟುಕೊಂಡು ಅಧ್ಯಯನಕ್ಕೆ ತೊಡಗುವುದು ಗೇಲಿಗೆ ಒಳಗಾಗಬಹುದು. ವಿಶಾಲವಾದ ವ್ಯಾಪ್ತಿಯ ಅನುಕೂಲಗಳೇ ಲಭ್ಯವಾಗದಿದ್ದಾಗಲೂ ಇಂಥಾ ಸಂಶೋಧನೆಗಳು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಆದ್ದರಿಂದ ಕೆಲವು ಇತಿಮಿತಿ ಒಳಗೇನೆ ಸಂಶೋಧನೆ ನಡೆಸಲು ಪ್ರಯತ್ನಿಸಿದ್ದೇನೆ.

**೪.ಸಂಶೋಧನೆಯ ಸ್ವರೂಪ:-**

ಜನಸಾಮಾನ್ಯರಿಗೆ ಇಂದಿನ ಅಂತರ್ಜಾಲಗಳು ನೀಡುವ ಮಾಹಿತಿಯನ್ನು ಅಂದಿನ ವಚನಗಳು, ಕೀರ್ತನೆಗಳು ಮಾಡುತ್ತಿದ್ದವು. ಇಂತಹ ಹಲವು ಸಂಗತಿಗಳನ್ನು ತಿಳಿಯಲು ಹುದುಗಿ ಹೋಗಿರುವ ಸಾಹಿತ್ಯದ ಪಳೆಯುಳಿಕೆಯ ಕೆಲವನ್ನು ಅಗೆದು ನೋಡುವ ಸನ್ನಿವೇಶ ಈಗ ಒದಗಿಬಂದಿದೆ. ಹೆಣ್ಣಿಗೆ ತನ್ನ ದೇಹದ ಮೇಲೆ ಅಧಿಕಾರ ಇರುವುದಿಲ್ಲ, ತನ್ನ ದೇಹ ಯಾತಕ್ಕಾಗಿ, ಯಾರಿಂದ ಬಳಸಲ್ಪಡಬೇಕು, ಎಂದು ನಿರ್ಧರಿಸುವಲ್ಲಿ ಅವಳಿಗೆ ಯಾವುದೇ ಸ್ವಾತಂತ್ರ್ಯವಿಲ್ಲ. ಹಾಗೆಯೇ ಅವಳ ದೇಹ ಒಂದನ್ನು ಬಯಸಿದರೆ ಮನಸ್ಸು ಮತ್ತೊಂದನ್ನು ಬಯಸುತ್ತದೆ. ಎಂಬುದರೊಡನೆ ವ್ಯಕ್ತಿಸ್ವಾತಂತ್ರ್ಯದ ಪರಿಕಲ್ಪನೆ ಈ ಅಂಶಗಳನ್ನು ಅಕ್ಕಮಹಾದೇವಿ ಮತ್ತು ಗಿರಿಯಮ್ಮನ ವಚನ-ಕೀರ್ತನೆಗಳ ಸಾಹಿತ್ಯದಲ್ಲಿ ವಿಶ್ಲೇಷಣೆ ಮಾಡಲಾಗುವುದು. ಸೃಜನ ಶೀಲನೆಯ ಒಂದು ಆಕಾರ ತಳೆಯಲು ಈ ಅಧ್ಯಯನ ಒಂದು ಪಾತ್ರ ನಿರ್ವಹಿಸುತ್ತದೆ. ಅಕ್ಕ ಮತ್ತು ಗಿರಿಯಮ್ಮನ ವಚನ-ಕೀರ್ತನೆಗಳು ಜನಸಾಮಾನ್ಯರ ಬದುಕು ಬವಣೆಗಳಿಗೆ ದನಿಯಾಗಿ ಸಾಹಿತ್ಯದ ಅರ್ಥ ಸ್ವರೂಪವನ್ನು ಬದಲಾಯಿಸಿದುದು ವಚನಕಾರರ ಉದಾತ್ತ ಜೀವನ ದರ್ಶನಕ್ಕೆ ಪೂರಕವಾಗಿದೆ.

ವಚನ ಸಾಹಿತ್ಯವು ಆತ್ಮ ಶೋಧನೆ, ಆಧ್ಯಾತ್ಮ ಚಿಂತನೆ ಮತ್ತು ಅಭಿವ್ಯಕ್ತಿ ಮಾಧ್ಯಮವಾಗಿ ಶರಣ ಚಳುವಳಿಯ ಮುಖವಾಣಿಯಾಗಿ ಸಮಕಾಲೀನ ಬೌದ್ಧಿಕ ಪರಿಸರವನ್ನು ವ್ಯಾಪಕವಾಗಿ ಪ್ರಭಾವಿಸಿತು. ಲೌಕಿಕ ಸಂಬಂಧಗಳ ಉಪೇಕ್ಷೆ, ಸರ್ವಾಪಣ ಭಕ್ತಿ, ವಿರಕ್ತಿ, ಸತಿ-ಪತಿ ಸಂಬಂಧದ ಆಪ್ತ ಆಂತರಂಗಿಕ ಮಧುರ ನೆಲೆಗಳ ಬಗೆಗೆ ಮುಕ್ತ ಅಭಿವ್ಯಕ್ತಿ ಅವರ ವೈಶಿಷ್ಟ್ಯವಾಗಿದೆ.

ಹರಿದಾಸ ಪರಂಪರೆಯಲ್ಲಿ ಹೆಳವನಕಟ್ಟೆ ಗಿರಿಯಮ್ಮನವರ ಹೆಸರು ಪ್ರಮುಖವಾದುದ್ದು. ಕೀರ್ತನೆಗಳು ಭಕ್ತಿ ಮೂಲದಿಂದ ಮೂಡಿಬಂದಿರುವುದರಿಂದ ಭಕ್ತಿ ಮಾರ್ಗದ ಪಥಿಕರ ಒಳತೋಟಿ ತುಮುಲಗಳನ್ನು ಅಲ್ಲಲ್ಲಿ ಕಾಣಬಹುದು **'ಮನವೆನ್ನ ಮಾತ ಕೇಳದು'** ಎಂದು ಚಡಪಡಿಸುತ್ತಾಳೆ. ಮನಸ್ಸನ್ನು ನಿಯಂತ್ರಣದಲ್ಲಿಡುವುದು ಬಹಳ ಕಠಿಣ **'ತಾರಮ್ಮ ಶ್ರೀರಂಗಧಾಮನ ತಂದು ತೋರಮ್ಮ'** ಎಂದು ಮೊರೆ ಇಡುತ್ತಾಳೆ. ಈಕೆಯ ಕೀರ್ತನೆಗಳು ಅರಿಷಡ್ವರ್ಗಗಳ ದೈವಿಕವಾಗಿವೆ, ಈಕೆಯ ವಿರಹ ದೈಹಿಕ ವಿರಹವಾಗಿದೆ. ಹೆಳವನಕಟ್ಟೆ ಗಿರಿಯಮ್ಮ ದಶವತಾರದ ಬಣ್ಣನೆ, ವಿರಹದ ಉತ್ಕಟತೆ, ಭಕ್ತಿ ಮಾರ್ಗ, ಸ್ತ್ರಿ ಶಕ್ತಿಯ ಅದಮ್ಯತೆ, ದಲಿತತ್ವ ಮತ್ತಿತರ ವಿಚಾರ ಧಾರೆಗಳ ಬಗ್ಗೆ ಅಧ್ಯಯನ ಮಾಡಬೇಕಾಗಿರುವುದು ಅಗತ್ಯವಿದೆ. ಗಿರಿಯಮ್ಮನ ದೃಷ್ಟಿಯಲ್ಲಿ ದೇವರು, ವಿಧಿ ಬರಹ, ಭಕ್ತಿ, ಭಾವನಾತ್ಮಕ ಅಥವಾ ಆಧ್ಯಾತ್ಮಿಕ ಅಲೌಕಿಕ ಅಂಶಗಳು ಸಾಹಿತ್ಯದ ಕೀಲಿ ಕೈಗಳು. ಸ್ತ್ರೀ ಸಂವೇದನೆಯು ಪ್ರಖರವಾಗಿ ಮಿಂಚಿರುವುದು ವೈಶಿಷ್ಟ ಪೂರ್ಣವಾಗಿದೆ.

**"ಕಾಮಧೇನು ಕರೆವಡೆ ಕರುವಿನ ಹಂಗೇಕೆ"** ಎನ್ನುವ ಅಕ್ಕನ ವಚನದಲ್ಲಿ ಮತ್ತು **"ಯಾತಕೆ ಮರುಳಾದಿ ಹೀಂಗೆ ಎಲೆಮನವೆ, ಕಾಕು ಬುದ್ಧಿ ಬಿಡುಬಿಡು ಸುಮ್ಮನೇ ಎಲೆಮನವೆ"** ಎಂದು ಗಿರಿಯಮ್ಮನ ಕೀರ್ತನೆಯಲ್ಲಿ ಉಲ್ಲೇಖಿಸಲಾಗಿದೆ.

ಆಧುನಿಕ ಯುಗದ ಜಾಗತೀಕರಣದ ಪ್ರಭಾವಳಿಯಲ್ಲಿ ಮುಸುಕಿ ಹೋದ ಹೆಣ್ಣುಮಕ್ಕಳ ಚಲನ ಶೀಲತೆಗೆ ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆಯ ಗಿರಿಯಮ್ಮನ ಸ್ತ್ರೀ ಸಂವೇದನಾ ಆಧಾರಿತ ಸಾಹಿತ್ಯವು ಅವರ ಜೀವನ ಕ್ರಮಕ್ಕೆ ಚೈತನ್ಯದಾಯಕವಾಗಲೆಂಬ ಅರ್ಥಪೂರ್ಣತೆಯೊಂದಿಗೆ ನನ್ನ ಸಂಶೋಧನೆಯು ಪೂರಕವಾಗಬಹುದೆಂದು ಅಧ್ಯಯನ ಕೈಗೊಂಡಿದ್ದೇನೆ.

# ಅಧ್ಯಾಯ ೨

## ಸ್ತ್ರೀವಾದದ ಪರಿಕಲ್ಪನೆ ಮತ್ತು ಅನುಸಂಧಾನ

ಉಟ್ಟ ಸೀರೆಯ ಸೀಳಿ ತೊಟ್ಟ ತೊಡಿಗೆಯ ಮುರಿದು
ಬಿಟ್ಟೆನು ನಾನು ಬಿಡುಮುಡಿಯ ಎಲೆ ದೇವ
ಕೊಟ್ಟೆನು ಎನ್ನತನುಮನವೆ[1]

ವೈರಾಗ್ಯ ಸಾಧನೆ ಅತಿ ಕಠೋರವಾದುದು ಮನಸಿನಲ್ಲಿ ಕಾಡುವಂತಹ ಮೋಹ, ಮಮಕಾರ, ದೇಹಭಾವನೆಗಳನ್ನು ಬಯಲಾಗಿಸಿಕೊಳ್ಳುವುದು ಸಾಮಾನ್ಯರಿಗೆ ಸಾಧ್ಯವಾಗದ ಸಾಧನೆ, ಗುರುವಿನ ಕೃಪೆ ಕಠಿಣ ಸಾಧನ, ಅಚಲ ನಿಷ್ಠೆಯುಳ್ಳ ಭಕ್ತರಿಗೆ ಮಾತ್ರ ಸಾದ್ಯವಾಗಬಲ್ಲ ವೈರಾಗ್ಯ ಮಾರ್ಗ, ಸಕಲ ಸಂಕಷ್ಟಗಳನ್ನು ಗೆದ್ದು ಭಕ್ತಿ, ಜ್ಞಾನ, ವೈರಾಗ್ಯದ ಸೋಪಾನದಿಂದ ಶ್ರೀ ಗಿರಿಯನ್ನೇರಿದ ಮಹಾದೇವಿಯಕ್ಕನ ಸರ್ವ ಸಮರ್ಪಣೆಯ ಭಕ್ತಿ ಮತ್ತು ವಿರಕ್ತಿಯ ಸ್ವರೂಪ ಪ್ರತಿಫಲಿತವಾಗಿದೆ.

ಉದ್ದಾಳಿಕನ ಕಥೆಯ ಕೀರ್ತನೆಗಳಲ್ಲಿ ಜೈಮಿನಿಭಾರತದಲ್ಲಿ ರಾಮ ಸೀತೆಯನ್ನು ಕಾಡಿಗಟ್ಟಿದಾಗ **ಕರುಣಾಳು ರಾಘವನಲಿ ತಪ್ಪಿಲ್ಲ ತಪ್ಪೆಲ್ಲವೂ ನನ್ನದು**, ಎಂದು ತಪ್ಪೆಲ್ಲವನ್ನು ಸೀತೆ ತನ್ನ ಮೇಲೆ ಹಾಕಿಕೊಂಡಂತೆ ಚಂದ್ರವತಿ ಕೂಡ

ಲಿಂಗ ಪೂಜೆ ಮಾಡಿದವರ ನಿಂದಿಸಿದೆನೊ
ನಿಂದಿಸಿದೆನೊ ಸಾಧು ಜನರ
ವಂದಿಸಿದ್ಹೋದೇನೊ ಗುರು ಹಿರಿಯರ ಚರಣಕ್ಕೆ
ಬಂದಿತೆನಗೆ ಅಪನಿಂದ್ಯ[2]

ಪೂಜೆಯಾಗುವಾಗ ನೋಡದೆ ಹೋದನೆ? ಸಾಧು ಜನರ ತಾಯಿ ತಂದೆಗಳ ಮಾತು ಮೀರಿದನೆ ಎಂದು ಆತ್ಮ ವಿಮರ್ಶೆ ಮಾಡಿಕೊಳ್ಳುವುದು ಪಾಪ-ಪುಣ್ಯಗಳ ಪರಿಕಲ್ಪನೆಯ ಹಿನ್ನೆಲೆ ಎನ್ನಬಹುದು. ಈ ರೀತಿ ತನ್ನನ್ನೆ ಹಳಿದುಕೊಂಡು ಶೋಕಿಸುವುದು ಸಮಾಜ ಹಿಂದಿನಿಂದಿಲೂ ಹೆಣ್ಣನ್ನು ಆರೋಪಿ ಸ್ಥಾನದಲ್ಲಿಟ್ಟು ನೋಡಿದ್ದರ ಪರಿಣಾಮ ಎನ್ನಬಹುದು.

ಸ್ತ್ರೀ ಸಂವೇದನೆಯ ಮಾತು ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ. ಸಂವೇದನೆಯ ಸ್ವರೂಪ ಕಾಲ-ಕಾಲಕ್ಕೆ ಬೇರೆ ರೀತಿಯಾಗಿರಬಹುದು. ಬೇರೆ ನೆಲೆಗಳಿಂದ ಪ್ರೇರಿತವಾಗಿರಬಹುದು. ಸ್ತ್ರೀ ಸಂವೇದನೆ ಎಂದು ನಾವು ಗುರುತಿಸುವ ಪರಿಭಾಷೆ ಮತ್ತು ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಂಡು ಹಿಂದಿನ ಸಾಹಿತ್ಯಾಭಿವ್ಯಕ್ತಿಯನ್ನು ನೋಡಿದಾಗ ಇದಕ್ಕೆ ಒಪ್ಪದ ವಿಷಯಗಳು ಹೊರಬೀಳಬಹುದು. ಹೊರಬೀಳುವುದು ತಪ್ಪಲ್ಲ. ಅಧ್ಯಯನದ ನೆಲೆಯಲ್ಲಿ ಹೊರತೆಗೆಯುವ ಪ್ರಕ್ರಿಯೆಯೇ ಈ ಚಿಂತನೆಯ ತುಡಿತವಾಗಿದೆ. ಆದ್ದರಿಂದ ಕನ್ನಡ ಸಾಹಿತ್ಯ ಅಭಿವ್ಯಕ್ತಿಯಲ್ಲಿ ವಚನ ಕೀರ್ತನೆಗಳಲ್ಲಿ ಸ್ತ್ರೀ ಮತ್ತು ಸ್ತ್ರೀ ಸಂವೇದನೆಗಳು ಕಾಣಿಸಿಕೊಂಡ ಕ್ರಮವನ್ನು ಗ್ರಹಿಸುವ, ವಿವರಿಸುವ ಮತ್ತು ವಿಮರ್ಶಿಸುವ ಪ್ರಯತ್ನವನ್ನು ಈ ವಿಷಯವು ಒಳಗೊಳ್ಳಲಿದೆ.

**ಅಕ್ಕಮಹಾದೇವಿ ವಚನಗಳಲ್ಲಿ ಸ್ತ್ರೀಸಂವೇದನೆ:-**

ತಪ್ಪ ಹೊರಿಸಿ ಹೊರಟಿಹನೆಂಬುದು ಸತ್ಯವೆ
ತನುಸೀರೆಯನುಳಿದು ನಿರ್ವಾಣದಲಿ ಮನದ
ಬ್ರಾಂತು ನಿಶ್ಚಯವಾಗದು.ಕೇಶವೆಂಬ ಸೀರೆ ಅಂಗಕ್ಕೆ
ಮರೆಯಾಯಿತ್ತು ಅಪಮಾನವೆಂತು ಹರಿಯಿತ್ತು
ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ[3]

ಶ್ರೇಷ್ಠ ಅನುಭಾವಿ, ಕವಯಿತ್ರಿಯದ ಅಕ್ಕಮಹಾದೇವಿ ಸ್ತ್ರೀಸಮಾಜದಲ್ಲಿ ಮೂಡಿಸಿದ ಜಾಗೃತಿ ಮತ್ತು ಆತ್ಮವಿಶ್ವಾಸ ಅನನ್ಯವಾದುದು. ಸ್ತ್ರೀಯರ ಆಧ್ಯಾತ್ಮಿಕ ಆಸಕ್ತಿ ವೈಯಕ್ತಿಕ ಸಾಧನೆಗೆ ಸಂದ ಮನ್ನಣೆಗೆ ಧೀಮಂತ ಮಾದರಿಯಾಗಿ ಕಂಡುಬರುವ ಮಹಾದೇವಿಯಕ್ಕ, ಹೆಣ್ತನದ ಪಾರಂಪರಿಕ ನಿರ್ವಚನವನ್ನು ಪಲ್ಲಟಗೊಳಿಸಿದ ಸಾಧಕಿ. ಮಹಿಳೆಯ ಅಸ್ತಿತ್ವ, ಸ್ವಂತಿಕೆ, ಸ್ವಾಭಿವ್ಯಕ್ತಿಯನ್ನು ದಮನಗೊಳಿಸಲೆತ್ನಿಸಿದ ಸ್ತ್ರೀವಿರೋಧ ವ್ಯವಸ್ಥೆಯಲ್ಲಿ ತನ್ನ ಸತ್ಯಸಾಧನೆಯಿಂದ ಶ್ರೇಷ್ಠ ಅನುಭಾವಿಯಾಗಿ ಸಮಕಾಲೀನ ಅನುಭವ ಪ್ರಪಂಚದ ಮನ್ನಣೆ ಗಳಿಸಿದುದು ಅಕ್ಕನ ಅಪೂರ್ವ ಸಾಧನೆಯಾಗಿದೆ.

ಅಕ್ಕಮಹಾದೇವಿಯ ವಚನಗಳಲ್ಲಿ ಸಮಾಜವನ್ನು ಕುರಿತ ಆಲೋಚನೆಗಳನ್ನು ಸಂಸಾರದ ಸಂಬಂಧವೊಂದರಲ್ಲಿಯೇ ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಏಕೆಂದರೆ ಅವಳ ಎಲ್ಲ ವಚನಗಳು ಮುಖ್ಯವಾಗಿ ಸಂಸಾರದ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡಂಥವುಗಳು, ಸಂಸಾರದ ರಚನೆಯನ್ನು ರೂಪಿಸಿರಬಹುದಾದ ಅನೇಕ ರೀತಿಯ ವ್ಯಕ್ತಿಗಳ ಸಂಬಂಧಗಳು ಮತ್ತು ಈ ಸಂಬಂಧಗಳಲ್ಲಿ ಹೊರಹೊಮ್ಮುವ ಕ್ರಿಯೆಯ ಸ್ವರೂಪಗಳು ಇವೆಲ್ಲವುಗಳನ್ನು ಕುರಿತ ಆಲೋಚನೆ ಮತ್ತು ಪ್ರತಿಕ್ರಿಯೆಗಳಲ್ಲಿ ಅಕ್ಕಮಹಾದೇವಿಯ ವಚನಗಳ ಲಕ್ಷಣಗಳು ಬೆಳೆಯುತ್ತವೆ.

ಅಕ್ಕನ ವಚನಗಳಲ್ಲಿ ಅವಳ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಪ್ರಮುಖ ದ್ವಂದ್ವವೊಂದು ದೇಹ ಹಾಗೂ ಮನಸ್ಸುಗಳ ಛಿದ್ರಗೊಂಡ ಸ್ಥಿತಿಯನ್ನು ವಿವರಿಸುವುದರಿಂದ ಪ್ರಾರಂಭವಾಗುತ್ತದೆ ಎನ್ನಬಹುದು. ಈ ಛಿದ್ರಗೊಂಡ ಸ್ಥಿತಿಯು ಅವಳ ಸಂದರ್ಭದಲ್ಲಿ ಅತ್ಯಂತ ವಿಶಿಷ್ಟವಾಗಿರುವುದನ್ನು ಗಮನಿಸಬಹುದು.

ಎನ್ನ ಕಾಯಮಣ್ಣು, ಜೀವ ಬಯಲು
ಆವುದ ಹಿಡಿವೆನಯ್ಯಾ ದೇವಾ?
ನಿಮ್ಮನಾದ ಪರಿಯಲ್ಲಿ ನೆನವಯ್ಯಾ
ಎನ್ನ ಮಾಯೆಯನು ಮಾಣಿಸಯ್ಯಾ
ಚೆನ್ನಮಲ್ಲಿಕಾರ್ಜುನಾ[4]

ತನ್ನ ಬದುಕಿನಲ್ಲಿ ಏರ್ಪಟ್ಟ ಕಂದರವನ್ನು ಅಕ್ಕನ ವಚನವು ತಿಳಿಸುತ್ತದೆ. ಅವಳ ಬದುಕಿನ ಕಂದರದ ಕ್ಷಣಗಳಾದರೂ ಎಂಥವು? ವಚನವೇ ವಿವರಿಸುವಂತೆ ಒಂದು ಸ್ಥಿತಿಯಲ್ಲಿ ಇವಳು ಲೌಕಿಕ ಜೀವನದ ಅನಿವಾರ್ಯವಾದ ಒಂದು ಭಾಗವಾಗಿದ್ದಾಳೆ. ಇನ್ನೊಂದು ನೆಲೆಯಲ್ಲಿ ಇವಳ ಬಯಕೆ, ಆಕಾಂಕ್ಷೆಗಳು ಈ ಕ್ಷಣಿಕ, ಅರ್ಥಹೀನ ಜೀವನವನ್ನು ನಿರಾಕರಿಸುವ ಆಶಯವನ್ನು ಹೊಂದಿವೆ. ಬದುಕು ಹಾಗೂ ಆಶಯ ಇವೆರಡರ ನಡುವೆ ಉಂಟಾದ ಬಿರುಕು ಈ ವಚನದಲ್ಲಿ ಮುಖ್ಯವಾಗಿ ಸೂಚಿತವಾಗಿದೆ. ವಚನದಲ್ಲಿ ಸೂಚಿತವಾದ ಮಣ್ಣು, ಬಯಲುಗಳು ಎರಡು ವಾತಾವರಣವನ್ನು ಸೂಚಿಸುವಂಥವುಗಳೇ ಆಗಿವೆ.

ಸಂಶೋಧನೆಯಲ್ಲಿ **ಸಿಂಕ್ರಾನಿಕ್** ಮತ್ತು **ಡೈಕ್ರಾನಿಕ್** ಎಂಬ ಪರಿಕಲ್ಪನೆಗಳು ಕಂಡುಬರುತ್ತವೆ.[೫] ಇಡಿಯಾಗಿ ನೋಡುವುದನ್ನು ಸಿಂಕ್ರಾನಿಕ್ ಎನ್ನುತ್ತೇವೆ, ಅಕ್ಕಮಹಾದೇವಿ ನಮಗೆ ಇಡಿಯಾಗಿ ಸಿಗುತ್ತಾಳೆ. ಅವಳ ಬಗ್ಗೆ ಬಿಡಿಯಗಿ ನೋಡಲು ಸಾಧ್ಯವಿಲ್ಲ. ಅವಳ ಮನಸ್ಸಿನ ತೊಳಲಾಟಗಳು ಇದಕ್ಕೆ ಕಾರಣವಾಗಿರಬಹುದು. ಬಿಡಿಯಾಗಿ ನೋಡುವುದನ್ನು ಡ್ರೈಕ್ರಾನಿಕ್ ಎನ್ನುತ್ತೇವೆ. ಗಿರಿಯಮ್ಮ ನಮಗೆ ಬಿಡಿಬಿಡಿಯಾಗಿ ಸಿಗುತ್ತಾಳೆ. ಅವಳ ಮನಸ್ಸಿನ ವರ್ತನೆಗಳು, ಭಾವನೆಗಳು ನಮಗೆ ಅರ್ಥವಾಗುತ್ತವೆ.

ಅಕ್ಕಮಹಾದೇವಿ ಅನುಭಾವದ ಆಶಯಗಳು ಪ್ರೇಮ ಮತ್ತು ಮಲ್ಲಿಕಾರ್ಜುನನೊಡನೆ ಗಾಢ ಸಂಬಂಧವನ್ನು ಹೊಂದುವಂಥಹದೇ ಆಗಿದೆ. ಈ ಪ್ರೇಮದ ಆಶಯವು ಸುತ್ತಮುತ್ತಲ ಕಾಮವಿಕಾರತೆಯ ಬೆಳವಣಿಗೆಯ ಪ್ರತಿಕ್ರಿಯೆಯಾಗಿಯೂ ಇವು ವಚನಗಳಲ್ಲಿ ರೂಪುಗೊಳ್ಳುತ್ತವೆ. ಪ್ರೇಮ ಮತ್ತು ಕಾಮ ವಿಕಾರತೆಯ ಅಂಶಗಳು ಇವೆರಡರ ನಡುವಣ ವಿರೋಧವು ಇವಳ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಪ್ರಧಾನವಾದ ಪಾತ್ರವನ್ನು ವಹಿಸಿದ ಹಾಗೆ ತೋರುತ್ತದೆ. ಭಕ್ತಿ ಪಂಥದ ಪ್ರಧಾನ ಲಕ್ಷಣವಾದ ಭಕ್ತನು ಪ್ರಿಯತಮೆಯಾಗಿ, ದೇವರು ಪ್ರಿಯಕರನಾಗಿ ರೂಪುಗೊಳ್ಳುವ ನೆಲೆಗಳ ತಾತ್ವಿಕ ಸ್ವರೂಪಗಳು ಚಾರಿತ್ರಿಕ ಅನಿವಾರ್ಯತೆಯ ಕಾರಣದಿಂದಲೇ ರೂಪುಗೊಳ್ಳತ್ತವೆ ಎಂದು ಊಹಿಸಬಹುದು. ಈ ಕಾರಣದಿಂದ ಅದು ಅವಳ ವ್ಯಕ್ತಿತ್ವದ ಬೆಳವಣಿಗೆಯ ಅನಿವಾರ್ಯವಾದ ಭಾಗವಾಗಿ ರೂಪುಗೊಂಡಿತೆಂದೇ ಹೇಳಬಹುದು. ಲೌಕಿಕದಿಂದ ಅನುಭಾವದ ನೆಲೆಗಳನ್ನು ಕಾಣುವ ತಹತಹ ಇವಳಲ್ಲಿ ಅತ್ಯಂತ ತೀವ್ರವಾಗಿ ಶಕ್ತಿಯುತವಾಗಿ ಕಂಡುಬರುತ್ತದೆ.

ಅಕ್ಕಮಹಾದೇವಿಯ ಅನುಭಾವದ ಆಶಯಗಳು ಪ್ರೇಮ ಹಾಗೂ ಕಾಮವಿಕಾರತೆಯ ಸಂಘರ್ಷದಂದಲೇ ಹುಟ್ಟಿರಲು ಅನಿವಾರ್ಯವಾದ ನೆಲೆಗಳಿವೆ ಎನ್ನುವುದು ಕಾವ್ಯಗಳ ರಚನೆಯ ಸ್ವರೂಪಗಳೊಳಗಿಂದ ಗೋಚರವಾಗುತ್ತದೆ. ಅಕ್ಕಮಹಾದೇವಿಯ ವಚನಗಳಲ್ಲಿ ಬಹುಪಾಲು ವಚನಗಳು ಮನಸ್ಸು ಹಾಗೂ ದೇಹದ ಸಾಮರಸ್ಯಕ್ಕೆ ಅನುವಾಗುವ ವಾತಾವರಣದ ಬಯಕೆಯನ್ನು ಹೆಚ್ಚು ಸ್ಪಷ್ಟವಾಗಿಯೇ ಸೂಚಿಸುತ್ತದೆ. ಅನುಭಾವಿಯು ತನಗೆ ದೊರಕಿದೆ ಎಂದು ಹೇಳಿಕೊಳ್ಳುವ ಸಿದ್ದಕ್ಷಣಗಳು ಅಕ್ಕಮಹಾದೇವಿಯ ವಚನಗಳ ಪ್ರಧಾನವಾದ ಧೋರಣೆಗಳಲ್ಲವೇ ಅಲ್ಲ, ಇವಳ ವಚನಗಳ ಉದ್ದಕ್ಕೂ ಆ ಆಶಯಕ್ಕಾಗಿ ಹಾತೊರೆಯುವ ಹೋರಾಟವೊಂದು ಸ್ಪಷ್ಟವಾಗಿ ಕಾಣುತ್ತದೆ. ಈ ಹೋರಾಟದ ಹಲವಾರು ನೆಲೆಗಳನ್ನು ವಚನಗಳ ಸ್ವರೂಪದಿಂದಲೇ ಗ್ರಹಿಸಬಹುದಾಗಿದೆ.

ಆಕೆಯ ಪಾರಮಾರ್ಥಿಕ ವ್ಯಕ್ತಿತ್ವವನ್ನು ಅರಿಯದೇ ಒಂಟಿ ಹೆಣ್ಣೆಂದು ಬೆನ್ನತ್ತಿ ಅಪಮಾನಿಸಿದ ವಾಸ್ತವವನ್ನು ಧೈರ್ಯವಿವೇಕದಿಂದ ಎದುರಿಸಿದ ರೀತಿ ಹೀಗಿದೆ.

ಬಟ್ಟಿಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ
ಅಣ್ಣಾ ನಾನು ಹೆಂಗೂಸಲ್ಲ,ಅಣ್ಣಾ ನಾನು ಸೂಳೆಯಲ್ಲ
ಅಣ್ಣಾ, ಮತ್ತೆ ನನ್ನ ಕಂಡು ಆರೆಂದು ಬಂದಿರಣ್ಣಾ
ಚನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿದ ಪುರುಷರು
ನಮಗಾಗದ ಮೋರೆ ನೋಡಣ್ಣಾ,[೬]

ಹೆಣ್ಣು ಗೃಹಿಣಿತ್ವದ ಭಾರದಡಿ ನಲುಗುತ್ತಿದ್ದರೂ ಅದರ ಅರ್ಥವನ್ನು ಗ್ರಹಿಸಲಾರಳು. ತನ್ನ ಕರ್ತವ್ಯ ಬಾಧ್ಯತೆಗಳನ್ನು ನಿರ್ದೇಶಿಸುವ ಈ ತನ್ನ ಪಟ್ಟವನ್ನೆ ತನಗೆ ದೊರೆತ ಅತ್ಯುನ್ನತ ಸಮ್ಮಾನವೆಂದು ಗ್ರಹಿಸಿ ಬದುಕಲು ಯತ್ನಿಸುತ್ತಾಳೆ. ಆದರೆ ಇಷ್ಟೆಲ್ಲ ದಮನಗೊಂಡ ಮೇಲೂ ಅವಳ ಸೃಜನಶೀಲತೆಯ

ಕಾರ್ಯಪ್ರವೃತ್ತವಾಗಲು ಹವಣಿಸಬಹುದು. ಅವಳ ಪ್ರತಿಭೆಯು ತೀರಾ ಪ್ರಮುಖವಾಗಿದ್ದು ಅದರ ಕಿರಣಗಳು ಹೊರಹೊಮ್ಮಲು ಚಡಪಡಿಸಬಹುದು. ಈ ಮನಸ್ಥಿತಿಯಲ್ಲಿ ಹೆಣ್ಣು ತೀವ್ರವಾಗಿ ಅಸ್ವಸ್ಥಳಾಗುವುದು ಅಷ್ಟೇ ಸಹಜ. ಈ ಅಸ್ವಸ್ಥತೆ ಯಾವ ಆಕಾರಗಳಲ್ಲಿ ಕಾಣಿಸಿಕೊಳ್ಳುತ್ತದೋ ಹೇಳಲಾಗದು. ಓದು,ಬರಹ, ಕಲಿಕೆ, ಪ್ರೋತ್ಸಾಹಗಳ ವಾತಾವರಣವೇನಾದರೂ ಲಭ್ಯವಿದ್ದರೆ ಅದು ಕಲೆಯಾಗಿ ಅಭಿವ್ಯಕ್ತಗೊಳ್ಳಬಹುದು. ಹಾಗಲ್ಲದೆ ಉಸಿರುಕಟ್ಟಿದಲ್ಲಿ ಹುಚ್ಚುಮಾತು, ನಡವಳಿಕೆಗಳ ಅಪವರ್ತನೆಗಳ ಮಾನಸಿಕ ಕಾಯಿಲೆಗಳಾಗಿ ಕಾಣಿಸಿಕೊಳ್ಳಬಹುದು. ಆದರೆ ಅವಳ ಸೃಜನಶೀಲತೆಯ ಚಡಪಡಿಕೆ ಮಾತ್ರ ನಿರಂತರವಾಗುತ್ತದೆ. ಅಕ್ಕನ ವಚನಗಳಲ್ಲಿ ಇಂತಹ ಉಸಿರುಕಟ್ಟಿಸುವ ಸನ್ನಿವೇಶಗಳು ಕಂಡುಬರುತ್ತವೆ.

ಮಲ್ಲಿಕಾರ್ಜುನನ ಸಂಬಂಧವನ್ನು ಆಶಿಸುವ ಅಕ್ಕಮಹಾದೇವಿಯ ವಚನಗಳಲ್ಲಿ ಪ್ರೇಮದ ಅನುಭೂತಿಯೆಲ್ಲಾ ಬಹಳ ಪರಿಣಾಮಕಾರಿಯಾಗಿ ವ್ಯಕ್ತವಾಗುವುದು ಲೈಂಗಿಕ ಪ್ರತಿಮೆಗಳ ಮೂಲಕ ಹೇಳುವ ಸಂದರ್ಭಗಳಲ್ಲಿಯೇ ಮಲ್ಲಿಕಾರ್ಜುನನೊಡನೆ ತನ್ನ ಅಸ್ತಿತ್ವದ ನೆಲೆಗಳನ್ನು ರೂಪಿಸಿಕೊಳ್ಳುವ ಸ್ವರೂಪಗಳು ಮುಖ್ಯವಾಗಿ ಇವಳಲ್ಲಿ ನಲ್ಲೆ–ನಲ್ಲನ, ಹೆಂಡತಿ–ಗಂಡನ ರೀತಿಯದ್ದೇ ಆಗಿದೆ. ಲೌಕಿಕದೇ ಆದಂಥ ಇಂಥ ಸಂಬಂಧವು ಅರ್ಥಪೂರ್ಣವಾಗದೇ ಇರುವ ಸಂದರ್ಭವನ್ನು ಈ ಹೊಸ ಆಶಯದ ಬಯಕೆಯು ಹೇಳುತ್ತದೆ. ಅಂದರೆ ಅಕ್ಕಮಹಾದೇವಿಯ ಅನುಭಾವದ ಆಶಯವು ಲೌಕಿಕದಲ್ಲಿ ಸಾಧ್ಯವಾಗದೇ ಇದ್ದುದರ ವ್ಯಕ್ತಿತ್ವದ ಹಂಬಲದ ಸ್ವರೂಪವೇ ಅಗಿದೆ ಎನ್ನಬಹುದು. ಆದ್ದರಿಂದಲೇ ಅವಳ ಈ ಸಂಬಂಧವನ್ನು ಕುರಿತ ವಚನಗಳಲ್ಲಿ ಸ್ವತಂತ್ರ ಪ್ರವೃತ್ತಿಯ ಮನೋಭಾವವು ಎದ್ದು ಕಾಣುತ್ತದೆ. ಲೈಂಗಿಕ ಪ್ರತಿಮೆಗಳು ಸಂಪ್ರದಾಯದ ಚೌಕಟ್ಟುಗಳ ಎಲ್ಲೆಯನ್ನು ಮೀರುತ್ತವೆ. ಅವುಗಳ ತೀವ್ರತೆಯಂತೂ ಅವಳ ಒಂಟಿತನದ ತೊಳಲಾಟದ ಅಭಿವ್ಯಕ್ತಿಯ ಸಂದರ್ಭದಲ್ಲಿ ಹೆಚ್ಚು ಸ್ಪುಟವಾಗುತ್ತದೆ.

ಬಂದಹನೆಂದು ಬಟ್ಟೆಯ ನೋಡಿ
ಬರದಿದ್ದರೆ ಕರಗಿ ಕರಗಿ ಕೊರಗಿದೆನವ್ವಾ
ತಡವಾದಡೆ ಬಡವಾದೆ ತಾಯೆ
ಚನ್ನಮಲ್ಲಿಕಾರ್ಜುನನ ಒಂದಿರುಳಗಲಿದಡೆ
ತೆಕ್ಕೆ ಸಡಿಲಿದ ಜಕ್ಕವಕ್ಕಿಯಂತಾದನವ್ವಾ[2]

ಅಕ್ಕಮಹಾದೇವಿಯ ಈ ವಚನಗಳು ಪ್ರೇಮದ ಅಭೀಪ್ಸೆಯ ತೀವ್ರತೆಯನ್ನು ಒಂಟಿತನದ ಸಹಿಸಲಾಗದ ಸ್ಥಿತಿಯನ್ನು ವಿವರಿಸುತ್ತಿವೆ. ಈ ಅನುಭಾವದ ಆಶಯವು ವ್ಯಕ್ತಿತ್ವದ ಪರಿಪೂರ್ಣ ನೆಲೆಯ ಹುಡುಕಾಟವೇ ಆಗಿದೆ.

## ಹೆಳವನಕಟ್ಟೆ ಗಿರಿಯಮ್ಮನ ಕೀರ್ತನೆಗಳಲ್ಲಿ ಸ್ತ್ರೀಸಂವೇದನೆ:–

ಸರಳು ತಾಗಿದ ಹುಲ್ಲೆಯಂದದಿ ಬೇಡನ
ಬಲೆಗೆ ಸಿಕ್ಕಿದ ಪಕ್ಷಿಯಂತೆ
ಅರೆಗಾಯ ಹೊದಿದ ನಾಗರ ಮರಿಯಂತೆ
ಹೊರಳುತ್ತಿದ್ದಳು ಧರೆ ಮೇಲೆ[3]

ಹೆಳವನಕಟ್ಟೆ ಗಿರಿಯಮ್ಮ ಹರಿದಾಸ ಪರಂಪರೆ ಕಂಡಂತಹ ಕವಯಿತ್ರಿ. ಈಕೆಯ ಕಾಲವನ್ನು ಕ್ರಿ ಶ ೧೭೫೦ ಎಂದು ವಿದ್ವಾಂಸರು ಗುರ್ತಿಸುತ್ತಾರೆ. ಎಳವೆಯಿಂದಲೇ ಭಗವಂತನಲ್ಲಿ ಅಪಾರ ಭಕ್ತಿಯನ್ನು ಹೊಂದಿದ್ದರು. ಬಾಲ್ಯದಲ್ಲೆ ಹೆತ್ತವರನ್ನು ಕಳೆದುಕೊಂಡ ಈಕೆ ಬಾಲ್ಯತನವನ್ನು ನೀಗಲು ದೇವರ ಮೊರೆಹೋಗಿರಬೇಕು. ವಿವಾಹವಾದ ಬಳಿಕ ರಂಗನಾಥನನ್ನು ಹಗಲಿರುಳು ಧ್ಯಾನಿಸತೊಡಗಿದಳು. ಮನೆಯಲ್ಲಿಯೇ ದೇವರ ಪೂಜೆಯನ್ನು ಮಾಡುತ್ತಿದ್ದಳು. ಗಂಡನಿಗೆ ಇನ್ನೊಂದು ಮದುವೆ ಮಾಡಿ ತನ್ನ ಧ್ಯಾನಕ್ಕೆ ಯಾವುದೇ ಅಡಚಣೆಯಾಗಬಾರದೆಂದು ಗಿರಿಯಮ್ಮ ತಾನೇ ನಿಂತು ಮದುವೆ ಮಾಡಿಸಿದಳು. ಗಿರಿಯಮ್ಮ ಬದುಕಿದ್ದಾಗಲೇ ದಂತಕಥೆಯಾದಳು. ಸುಮತೀಂದ್ರಸ್ವಾಮಿಗಳು ಈಕೆಯಲ್ಲಿ ಹುದುಗಿದ್ದ ಪ್ರತಿಭೆಯನ್ನು ಗುರುತಿಸಿ ಪೋಷಿಸಿದರು. ಗೋಪಾಲದಾಸರು ಅನುಗ್ರಹವೂ ಲಭ್ಯವಾಗಿತ್ತು. ಗಿರಿಯಮ್ಮನ ಅಂಕಿತ ಹೆಳವನಕಟ್ಟೆ ರಂಗ, ಈಕೆಯ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆ ರಂಗನಾಥನ ಮೇಲಿನ ಭಕ್ತಿ.

ಹರಿದಾಸ ಸಾಹಿತ್ಯಕ್ಕೆ ೧೫೦೦ ವರ್ಷಗಳ ಇತಿಹಾಸವಿದೆ. ಭಕ್ತಿ ಸಾಹಿತ್ಯ ಪ್ರಕಾರವನ್ನು ೨೦೦ ಜನ ಹರಿದಾಸರು ತಮ್ಮ ಕೀರ್ತನೆಗಳಿಂದ ಕನ್ನಡ ಸಾಹಿತ್ಯವನ್ನು ಸಮೃದ್ಧವಾಗಿಸಿದ್ದಾರೆ. ದ್ವೈತ ಸಿದ್ಧಾಂತವನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಹರಿದಾಸ ಸಾಹಿತ್ಯ ಮುಖ್ಯವಾಗಿದೆ. ಮಹಿಳಾ ಕೀರ್ತನಕಾರರಲ್ಲಿ ೧೮ ನೇ ಶತಮಾನದಲ್ಲಿ ಕಾಣಿಸಿದಂತಹ ಭಕ್ತಿಯ ಮೂಲಕ ಸಾಹಿತ್ಯವನ್ನು ರಚಿಸಿದವರು ಹೆಳವನಕಟ್ಟೆ ಗಿರಿಯಮ್ಮ ಪ್ರಮುಖರು.

ಹೆಳವನಕಟ್ಟೆ ಗಿರಿಯಮ್ಮ ಈಕೆಯ ಸಾಹಿತ್ಯವನ್ನು ಕೀರ್ತನೆಗಳಲ್ಲಿ ರಚಿಸಿದ್ದಾರೆ. ಲಘು ಕಾವ್ಯವನ್ನು ರಚಿಸಿದ್ದಾರೆ. ೪೦ ಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದಾರೆ. ಲಘುಕಾವ್ಯಗಳಲ್ಲಿ ಚಂದ್ರಹಾಸನಕಥೆ, ಉದ್ದಾಳಿಕನಕಥೆ, ಸೀತಾಕಲ್ಯಾಣ, ಶಂಕರಗಂಡನಹಾಡು, ಲವಕುಶರ ಕಾಳಗ, ಬ್ರಹ್ಮಕೊರವಂಜಿ ಎಂಬವು ಉಪಲಬ್ದವಿದೆ. ಕಾಳಿಯ ಮರ್ದನ, ಗಜೇಂದ್ರಮೋಕ್ಷ, ಪತಿದಾನಕೊಟ್ಟಹಾಡು, ಭಾಗವತ ರಾಮಾಯಣ ಇವು ಉಪಲಬ್ದವಿಲ್ಲ. ಗಿರಿಯಮ್ಮ ಯಾವುದೇ ರೀತಿಯ ಶಿಕ್ಷಣ ಕಲಿತಿರಲಿಲ್ಲ. ಗುರುವಿನ ಮುಖದಿಂದ ಕಲಿತವರಲ್ಲ. ಪ್ರತಿಭೆ ಗಂಡಿನ ಸೊತ್ತು ಎನ್ನುವುದನ್ನು ಮುರಿದುನಿಂತವಳು.

ಭಗವಂತನನ್ನು ಸಖನಂತೆ ಕಾಣುವುದು ನವವಿಧ ಭಕ್ತಿಯಲ್ಲಿ ಒಂದು ಬಗೆ. ತನ್ನ ಇಷ್ಟದೈವವನ್ನು ನೆನೆಯುತ್ತ ಆಗಲಿರಲಾರದೆ ಗಿರಿಯಮ್ಮ ವಿರಹಭಾವ ವನ್ನು ಪ್ರಕಟಿಸುವ ಕೀರ್ತನೆಗಳನ್ನು ರಚಿಸಿದ್ದಾರೆ.

ಯಾಕೆ ಬಾರೆನಕ್ಕಯ್ಯ ಎನ್ನಯ
ಪ್ರಾಣನಾಥನ ಕರೆತಾರೆ ಸೈರಿಸಲಾರೆ

ಎಂದು ವಿರಹದ ಉತ್ಕಟತೆಯನ್ನು ಹಲವು ರಾಗಗಳಲ್ಲಿ ಮಿಡಿದಿದ್ದಾಳೆ ಗಿರಿಯಮ್ಮನದು ಭಾಗವತ ಮನೋಧರ್ಮ, ಹರಿ ಹರ ಇಬ್ಬರೂ ಈಕೆಯ ದೃಷ್ಟಿಯಲ್ಲಿ ಸಮಾನರು, ಶಿವನು ಗಿರಿಜಾಪತಿಯಾದರೆ ಹರಿ ಗಿರಿಯನ್ನೇ ಬೆನ್ನ ಮೇಲೆ ಹೊತ್ತವನು. ಓಬ್ಬ ಮನ್ಮಥನನ್ನು ಸುಟ್ಟರೆ ಮತ್ತೊಬ್ಬ ಮನ್ಮಥನ ತಂದೆ ಎಂಬುದನ್ನು ಒಂದೇ ಕೀರ್ತನೆಯಲ್ಲಿ ಜಾಣ್ಮೆಯಿಂದ ಇಬ್ಬರನ್ನೂ ಸಮಾವೇಶಗೊಳಿಸಿರುವುದು ವಿಶಿಷ್ಟವಾಗಿದೆ.

ಗಿರಿಯಮ್ಮನ ಹಾಡುಗಳು ಹೆಚ್ಚಾಗಿ ದೇವದೇವತೆಯರ ಸ್ತುತಿಗೀತೆಗಳು ಇಲ್ಲವೆ ಭಕ್ತ ಹೃದಯದ ಆರ್ತಮೊರೆಗಳಾಗಿವೆ. ಆಕೆಯ ಅನೇಕ ಹಾಡುಗಳ ಒಂದು ವಿಶೇಷತೆಯೆಂದರೆ ಅವೆಲ್ಲಕ್ಕೂ ಹಿನ್ನಲೆಯಾಗಿ ಒಂದೊಂದು ಘಟನೆಗಳನ್ನು ಹೇಳುವುದು ಅನೇಕ ಸಂದರ್ಭಗಳಲ್ಲಿ ಆ ಘಟನೆಗಳು

ಪವಾಡಗಳಾಗಿರುವುದು ಉದಾಹರಣೆಗೆ ಮುಂಗನೂರಿನ ರಾಜ ಕುಮಾರನಿಗೆ ನೇತ್ರದಾನ ಮಾಡಿಸಿದಾಗ ತೋರಬಾರದೆ ನಿಮ್ಮ ಚರಿತೆಯನು. ಎಂಬ ಹಾಡನ್ನು ಹಾಡಿದನೆಂದು ಹೇಳಲಾಗಿದೆ. ಹೊನ್ನ ತಾ ಗುಬ್ಬಿ ಹೊನ್ನ ತಾ. ಎಂಬ ಹಾಡನ್ನು ರಂಗನಾಥನ ಕೈಯ ಬೆರಳಿನ ಉಂಗುರ ಕಾಣೆಯಾದ ಸಂದರ್ಭದಲ್ಲಿ ಹಾಡಿದಾಗ ಗುಬ್ಬಿಯೊಂದು ಉಂಗುರವನ್ನು ತಂದುಕೊಟ್ಟಿತ್ತಂತೆ. ಆ ಪ್ರಾಂತ್ಯದಲ್ಲಿ ಬರಗಾಲ ಬಂದಾಗ ಮಳೆಯ ದಯಾಮಾಡೊ ರಂಗಯ್ಯ. ಎಂಬ ಹಾಡನ್ನು ಹಾಡಿ ಮಳೆಯನ್ನು ತರಿಸಿದರಂತೆ. ಎಂಬ ಉಲ್ಲೇಖಗಳು ಇವೆ.

ರಂಗನಾಥನ ವಿರಹದಿಂದ ತಪ್ತಳಾಗಿ ಆಲಾಪಿಸುವ ಪ್ರಿಯತಮೆಯಾಗಿಯೂ ಗಿರಿಯಮ್ಮ ಅನೇಕ ಹಾಡುಗಳಲ್ಲಿ ಕಾಣಿಸಿಕೊಳ್ಳುತ್ತಾಳೆ.

ತಾರಮ್ಮ ಶ್ರೀರಂಗಧಾಮನ ತಂದು
ತೋರಮ್ಮ ಎನ್ನಯ ಪ್ರೇಮನ
ವಾರಿಜಶತಕೋಟಿ ತೇಜನ ಹೊಂತ
ಕಾರಿಯ ನೀ ಕರತಾರೆ ಸೈರಿಸಲಾರೆ[೧೦]

ಎಂದು ಸಖಿಯೊಡನೆ ರಂಗನಾಥನಿಗಾಗಿ ಹಂಬಲಿಸುವಲ್ಲಿ ಕಾಣುವ ಮಧುರಭಾವವೇ ಯಾಕೆ ಬಾರೆನಕ್ಕಯ್ಯ. ಎಂಬ ಹಾಡಿನಲ್ಲಿ ದಶವತಾರಗಳೊಂದಿಗೆ ಪ್ರಿಯತಮನ ನಡವಳಿಕೆಯನ್ನು ಬಣ್ಣಿಸಿ ಇನ್ನಷ್ಟು ಮನೋಹರವಾಗಿ ಬಂದಿದೆ.

ಸ್ತುತಿಗೀತೆಗಳನ್ನು ಅಂತರಂಗ ನಿವೇದನೆ ಪ್ರಾರ್ಥನೆಗಳನ್ನು ಬಿಟ್ಟರೆ ಉಳಿಯುವ ಹಾಡುಗಳಲ್ಲಿ ಕೆಲಮಟ್ಟಿಗೆ ವಿಶಿಷ್ಟವಾಗಿ ನಿಲ್ಲುವ ಹಾಡುಗಳು ಪಾರಿಜಾತ ಮತ್ತು ಅಜಾಮಿಳ ಮೋಕ್ಷ, ಪಾರಿಜಾತದಲ್ಲಿ ೧೮ ನುಡಿಗಳಿದ್ದರೆ. ಅಜಾಮಿಳ ಮೋಕ್ಷದಲ್ಲಿ ೧೫ ನುಡಿಗಳಿವೆ. ಉಳಿದೆಲ್ಲಾ ಹಾಡುಗಳಿಗಿಂತ ಇವು ಸ್ವಲ್ಪ ದೊಡ್ಡದಾಗಿವೆಯಷ್ಟೆ ಅಲ್ಲ, ಭಾಗವತದಲ್ಲಿ ಬರುವ ವಸ್ತುವನ್ನು ಕುರಿತಿವೆ.

ವಚನ ಮತ್ತು ಕೀರ್ತನಕಾರರಿಗೆ ಅಂಕಿತವು ಮುಖ್ಯವಾಗಿದ್ದು ತಮ್ಮ ಇಷ್ಟದೇವರ ಹೆಸರನ್ನು ಅಂಕಿತವಾ ಇಟ್ಟುಕೊಂಡು ಸಾಹಿತ್ಯ ರಚನೆ ಮಾಡುತ್ತಾರೆ. ಇಂತಹ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆ ಭಕ್ತಿಯಾಗಿದ್ದು, ಅದೇ ಕೆಲವರಿಗೆ ಕಾಯಕವೂ ಕೂಡ ಅಗಿರುತ್ತದೆ. ಗಿರಿಯಮ್ಮ ರಂಗನಾಥನ ಮೇಲೆ ಮತ್ತು ಅಕ್ಕಳು ಚನ್ನಮಲ್ಲಿಕಾರ್ಜುನನ ಮೇಲೆ ಇರುವ ಮಧುರ ಉತ್ಕಟ ಪ್ರೇಮದ ಭಕ್ತಿಗಾಗಿ ಸಾಹಿತ್ಯ ರಚಿಸಿದರು. ಇವು ಪಂಡಿತರನ್ನೂ ಮೆಚ್ಚಿಸಲಿಕ್ಕಾಗಿಯೇ ರಾಜರಿಂದ ಮನ್ನಣೆ ಪಡೆಯಲಿಕ್ಕಾಗಿಯೋ ರಚಿತವಾದುವುಗಳಲ್ಲ. ಅವಳು ಭಗವಂತನನ್ನು ಅರ್ಚಿಸುವಾಗ ಹೊಮ್ಮಿದ ಸಹಜ ಗೀತೆಗಳು, ಅವಳ ಹಾಡುಗಳು, ಅವಳು ಬರೆದ ಕಥೆಗಳು ಕೂಡ ತನ್ನ ಸುತ್ತಮುತ್ತಲಿನ ಸಾಮಾನ್ಯ ಜನ ಅವುಗಳನ್ನು ಕೇಳಿ ಸನ್ಮಾರ್ಗದಲ್ಲಿ ನಡೆಯಲಿ ಎಂಬ ಉದ್ದೇಶದಿಂದ ರಚಿತವಾದವು.

ಉದ್ದಾಳಿಕನ ಕಥೆಯಲ್ಲಿ ಹೆಣ್ಣಿನ ನಿಕೃಷ್ಟವಾದ ಸ್ಥಾನಮಾನದ ಬಗ್ಗೆ ಉಲ್ಲೇಖಗಳು ಕಂಡುಬರುತ್ತವೆ. ನಡೆಸಿಕೊಂಡಂತ ರೀತಿ, ಅಂದಿನ ಸಮಯದಲ್ಲಿ ನೆಲೆಗೊಂಡಿದ್ದಂತಹ ಸಾಮಾಜಿಕ ಪರಿಸ್ಥಿತಿಯನ್ನು ವ್ಯಕ್ತವಾಗಿರುವುದನ್ನು ನೋಡಬಹುದು.

೧೨ನೇಯ ಶತಮಾನದಲ್ಲಿ ಪ್ರಬುದ್ಧಮಾನಕ್ಕೆ ಬಂದಂತಹ ಅಕ್ಕಮಹಾದೇವಿ ವಚನಯುಗದಲ್ಲಿ ತಮ್ಮದೇ ಆದ ಸ್ಥಾನವನ್ನು ಉಳಿಸಿಕೊಂಡಿದ್ದಾರೆ. ತಮ್ಮ ವಚನಗಳಲ್ಲಿ ಸಮಾಜದಲ್ಲಿ ಆಗಿಹೋಗಿದ್ದ ಮತ್ತು ಅಂಟಿಕೊಂಡಿದ್ದ ಅಸಹಜಗಳ ವಿರುದ್ಧವಾಗಿ ತಮ್ಮ ವಚನಗಳಲ್ಲಿ ವ್ಯಕ್ತಪಡಿಸಿದ್ದಾರೆ.

೧೬ನೇಯ ಶತಮಾನದಲ್ಲಿ ಹೆಳವನಕಟ್ಟೆ ಗಿರಿಯಮ್ಮಳು ಈಕೆಯು ಕೂಡ ಹರಿದಾಸ ಪರಂಪರೆಯಲ್ಲಿ ಕಾಣಿಸಿಕೊಂಡಂತಹ ಕೀರ್ತನಗಾರ್ತಿ, ತಮ್ಮ ಕೀರ್ತನೆಗಳ ಮೂಲಕ ಪ್ರಸಿದ್ಧಿಯಾದರು. ಇಬ್ಬರಲ್ಲೂ ಪ್ರಮುಖವಾಗಿ ಕಂಡುಬರುವ ಅಂಶವೆಂದರೆ ಭಕ್ತಿ. ಆ ಭಕ್ತಿಯ ಮೂಲಕ ದೇವರ ಜಪ ಮಾಡುತ್ತ ಲೌಕಿಕದಿಂದ ಅಲೌಕಿಕದೆಡೆಗೆ, ಮತ್ತು ಅಲೌಕಿಕದಿಂದ ಲೌಕಿಕದೆಡೆಗೆ ತಮ್ಮ ಧ್ಯಾನಾಸಕ್ತಿಯನ್ನು ವಿಭಿನ್ನ ದಾರಿಗಳ ಮೂಲಕ ಕಾಣಲು ಹೋರಟವರು. ಸಮಾಜವಿರೋಧಿ ನೀತಿಗಳ ವಿರುದ್ಧವಾಗಿ ನಿಂತವರು ಸಮಾಜವ್ಯವಸ್ಥೆಯನ್ನು ಬದಲಾಯಿಸುವ ಕಾರ್ಯವನ್ನು ಯಶಸ್ವಿಯಾಗಿ ನಿಭಾಯಿಸಿದಂತಹ ಕವಯಿತ್ರಿಯರು.

ಅಕ್ಕಮಹಾದೇವಿ ಕಾಲಘಟ್ಟದ ಬಗ್ಗೆ ಹಲವರಲ್ಲಿ ಭಿನ್ನಾಭಿಪ್ರಾಯವಿದೆ. ಕವಿಚರಿತೆಕಾರರು ಗುರುತಿಸುವಂತೆ ಕ್ರಿಶ ೧೧೬೦ ಶ್ರೇಷ್ಟ ಅನುಭಾವಿಗಳಾದ ಬಸವಣ್ಣ ಸಿದ್ದರಾಮ, ಪ್ರಭುದೇವ, ಸಮಕಾಲೀನಳು ಆಗಿದ್ದಾರೆ. ಅಕ್ಕನ ಜನ್ಮಸ್ಥಳ ಉಡುತಡಿ, ಆದ್ದರಿಂದ **ಉಡುತಡಿಯ ಮಹಾದೇವಿ,** ಎಂದು ಕರೆಯುವುದು ಉಂಟು. ಉಡುತಡಿಯ ಹೊರವಲಯದಲ್ಲಿ ಪ್ರಾಚೀನ ದೇವಸ್ಥಾನದಲ್ಲಿ ಅದನ್ನು ಪರದೇಶಿಮಲ್ಲಪ್ಪನ ಗುಡಿ, ಎಂದು ಜನ ಕರೆಯುತ್ತಾರೆ. ಅಕ್ಕನ ತಂದೆ ತಾಯಿ ಶಿವಭಕ್ತ ಶಿವಭಕ್ತೆ, ಚಾಮರಸನ ಪ್ರಕಾರ ನಿರ್ಮಲ ಸುಮತಿ, ಅಕ್ಕನ ಇಷ್ಟದೈವ ಚನ್ನಮಲ್ಲಿಕಾರ್ಜುನ, ವಚನಗಳಲ್ಲಿ ಪರಮಗುರು ಚನ್ನಮಲ್ಲಿಕಾರ್ಜುನ, ಸದ್ಗುರು ಚನ್ನಮಲ್ಲಿಕಾರ್ಜುನ ಎಂಬ ಉಲ್ಲೇಖವಿದೆ.

ಮಹಾದೇವಿಯಕ್ಕನ ರೂಪಲಾವಣ್ಯಕ್ಕೆ ಆಕರ್ಷಿತನಾದ ಉಡುತಡಿಯ ದೊರೆ ಕೌಶಿಕನು ರಾಜದಂಡದ ಬೆದರಿಕೆ ಹಾಕಿ ಅಕ್ಕನ ತಂದೆ ತಾಯಿಯರನ್ನು ಓಪ್ಪಿಸುತ್ತಾನೆ. ಭವಿಸಂಗವನ್ನು ಮಹಾದೇವಿಯಕ್ಕ ನಿರಾಕರಿಸಿದರೂ ತಾಯ್ತಂದೆಯ ಕ್ಷೇಮಕ್ಕಾಗಿ ಓಪ್ಪಿಕೊಳ್ಳುತ್ತಾಳೆ. ಆದರೆ ತನ್ನ ಗುರು ಲಿಂಗ ಜಂಗಮ ಪೂಜೆಗೆ ಅಡ್ಡಿಮಾಡದಿರಬೇಕೆಂದು, ತಿಳಿಸಿ ರಾಜನಿಂದ ಆ ತಪ್ಪು ಘಟಿಸಿದ ಮೇಲೆ ವಿವಾಹ ಸಂಬಂಧವಾಗಿ ತ್ಯಜಿಸಿ ಹೋಗುತ್ತಾಳೆ. ಕಾಲದ ದೃಷ್ಟಿಯಿಂದ ಅಕ್ಕನಿಗೆ ಸಮೀಪವರ್ತಿಯಾದ ಹರಿಹರನ ನಿರೂಪಣೆಯಲ್ಲಿನ ಅಕ್ಕ ಹಾಗೂ ಕೌಶಿಕ ವಿವಾಹವಾದುದು ಸ್ಪಷ್ಟವಾಗಿದೆ ಎಂದು ಅಭಿಪ್ರಾಯಪಡುತ್ತಾರೆ.

ಮಹಾದೇವಿಯಕ್ಕನ ಬದುಕಿನಲ್ಲಿ ಪುರುಷನೊಬ್ಬನ ಪ್ರವೇಶ, ಲೌಕಿಕ ವಿವಾಹದ ಒತ್ತಡ ಮತ್ತು ಹುಟ್ಟೂರನ್ನು ತೊರೆಯಲು ಕಾರಣವಾದ ವಿವಾಹದ ಸಂದಿಗ್ಧ ಸಂದರ್ಭವನ್ನು ಅಲ್ಲಗೆಳೆಯಲಾಗದಿದ್ದರೂ ವಿವಾಹದ ವಾಸ್ತವ ಸಾಧ್ಯತೆಯೇ ಸಮಸ್ಯಾತ್ಮಕವಾಗಿ ಉಳಿದುಕೊಂಡಿದೆ.

ತನ್ನ ಮದುವೆಯ ಹೊಣೆಯನ್ನು ತಾನೇ ವಹಿಸಿಕೊಂಡು ಸಾಧ್ಯವಾದರೆ ರಾಜನನ್ನು ತಿದ್ದಬೇಕೆಂಬ ಉದ್ದೇಶದಿಂದ ಕೌಶಿಕನ ಆರಮನೆಗೆ ಹೋಗಿರಬೇಕು. ಅಲ್ಲಿ ಅವನು ಅನುಚಿತವಾಗಿ ಆತುರದಿಂದ ನಡೆದುಕೊಳ್ಳಲು ಅವಳ ಹೊಣೆ ಅಲ್ಲಿಗೆ ಮುಗಿದು **ಸೆರಗ ಬಿಡು ಮರುಳೆ,** ಎಂದು ಅವನು ಸೆರಗನ್ನು ಬಿಡದಿರಲು ಸೀರೆಯನ್ನು ಬಿಟ್ಟು, ಆರಮನೆಯಿಂದ ನಡೆಯುತ್ತಾಳೆ. ಇದು ಅವಳ

ವಚನಗಳಿಂದ ಕಂಡು ಕೊಳ್ಳಬಹುದಾದ ಮತ್ತು ಸ್ವಲ್ಪ ಕಲ್ಪನೆಯನ್ನು ಬೆರೆಸಿ ಕಟ್ಟಬಹುದಾದ ಚಿತ್ರ,೧೧ ಎಂದು ತಿಪ್ಪೇರುದ್ರಸ್ವಾಮಿ ವಾದಿಸುತ್ತಾರೆ.

ಉಡುತಡಿ ತ್ಯಜಿಸಿದ ಮಹಾದೇವಿಯಕ್ಕ ಕಲ್ಯಾಣಕ್ಕೆ ಹೋಗಿ ಶರಣರನ್ನು ಭೇಟಿಯಾದಳೆನ್ನುವುದು ಪ್ರಾಚೀನ ಕಾವ್ಯಗಳು ಮತ್ತು ಶೂನ್ಯಸಂಪಾದನೆಗಳು ನಿರೂಪಿಸುತ್ತವೆ. ಕಲ್ಯಾಣ ಪ್ರವೇಶಿಸುವ ಸಂದರ್ಭದಲ್ಲಿ ಕಿನ್ನರ ಬ್ರಹ್ಮಯ್ಯನೆಂಬ ಶರಣನೊಬ್ಬನು ಮಹಾದೇವಿಯನ್ನು ಭೇಟಿಯಾಗಿ ಆಕೆಯ ವೈರಾಗ್ಯದ ನಿಲುವನ್ನು ಪರೀಕ್ಷಿಸಿದದೆನ್ನುವ ಘಟನೆಯೊಂದು ಮಹಾದೇವಿಯಕ್ಕನ ಬದುಕಿನ ಇನ್ನೊಂದು ಚರ್ಚಾಸ್ಪದ ಸಂಗತಿಯಾಗಿದೆ.

ನಂತರ ಕಿನ್ನರ ಬ್ರಹ್ಮಯ್ಯನ ಪರೀಕ್ಷೆಯಲ್ಲಿ ನಿಜಭಕ್ತಿ ವಿರಕ್ತಿಯನ್ನು ಸಾಬೀತುಪಡಿಸಿ ಆತನೊಂದಿಗೆ ಕಲ್ಯಾಣವನ್ನು ಪ್ರವೇಶಿಸಿ, ಅನುಭವ ಮಂಟಪಕ್ಕೆ ಬಂದಳೆನ್ನುವುದು ಪ್ರಾಚೀನ ಕವಿಗಳ ಅಭಿಪ್ರಾಯ. ಮಹಾದೇವಿಯಕ್ಕನ ಸತಿ ಪತಿ ಭಕ್ತಿಯ ಉಜ್ವಲತೆಯನ್ನು ಕಾಯ ಜೀವಭಾವದ ನಿವೃತ್ತಿಯನ್ನು ಪ್ರಪಂಚಕ್ಕೆ ಮನಗಾಣಿಸಿಕೊಡುವಲ್ಲಿ ಪೂರಕವಾಗಿರುವ ಅನುಭವಮಂಟಪದ ಅನುಭಾವ ಪರೀಕ್ಷೆಯು ಮಹಾದೇವಿಯಕ್ಕನ ಬದುಕಿನ ಅತ್ಯಂತ ಸಂಕೀರ್ಣ ಸಂದರ್ಭವಾಗಿದೆ.

ದಾಸ ಸಾಹಿತ್ಯದಲ್ಲಿ ಹೆಳವನಕಟ್ಟೆ ಗಿರಿಯಮ್ಮಳು ಹೆಸರು ಪ್ರಮುಖವಾದುದು. ಹೆಳವನಕಟ್ಟೆ ರಂಗ ಎಂಬ ಹೆಸರಿನಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಈಕೆಯ ಜನ್ಮಸ್ಥಳ ಧಾರವಾಡ ಜಿಲ್ಲೆಯ ರಾಣಿಬೆನ್ನೂರು. ತಂದೆ ಬಿಷ್ಟಪ್ಪ ಜೋಯಿಸರು, ತಾಯಿಯ ಹೆಸರು ತಿಳಿದಿರುವುದಿಲ್ಲ. ಗಿರಿಯಮ್ಮ ರಾಮ ಶ್ರೀ ರಘುನಂದನ, ಎಂದು ಆರಂಭವಾಗುವ ಒಂದು ಹಾಡಿನಲ್ಲಿ ಸದಾನಂದ ಸುಮತೀಂದ್ರ ಸ್ವಾಮಿಗಳನ್ನು ಸ್ಮರಿಸಿರುವುದು ಕಂಡುಬರುತ್ತದೆ. ಅವರ ಕಾಲ ೧೬೯೧-೧೭೫೫ ಎಂದು ತಿಳಿದಿದೆ, ಜೊತೆಗೆ ಗಿರಿಯಮ್ಮ ತನ್ನ ಚಂದ್ರಹಾಸನ ಕಥೆಯಲ್ಲಿ ಲಕ್ಷ್ಮೀಶಕವಿ ತನ್ನ ಜೈಮಿನಿ ಭಾರತದಲ್ಲಿ ಹೇಳಿದ ಚಂದ್ರಹಾಸನ ಕಥೆಯನ್ನೆ, ಚರಿತೆಯ ಮಾಡಿ ವರ್ಣಿಸುವೆ, ಎಂದು ಹೇಳಿಕೊಂಡಿರುವುದರಿಂದ ಈಕೆ ಲಕ್ಷ್ಮೀಶ ಜೈಮಿನಿ ಭಾರತವನ್ನು ಬರೆದ ನಂತರದಲ್ಲಿ ತನ್ನ ಚಂದ್ರಹಾಸನ ಕಥೆ ಬರೆದಿರಬಹುದು.[೧೨] ಲಕ್ಷ್ಮೀಶನ ಕಾಲ ಸುಮಾರು ಕ್ರಿಶ ೧೭೦೦ ಎಂದು ವಿದ್ವಾಂಸರು ಹೇಳಿದ್ದಾರೆ.

ತಂದೆ ತಾಯೆಂಬುದನು ನಾನೊಂದು ಗುರುತವನರಿಯೆ
ಕಂದೆಳೆನಿಸಿ ಕಡೆಹಾಯಿಸೊ ಹೆಳವನಕಟ್ಟೆ ರಂಗ.

ಗಿರಿಯಮ್ಮ ಬಾಲ್ಯದಲ್ಲಿ ಹೆತ್ತವರನ್ನು ಕಳೆದುಕೊಂಡು ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆಯುತ್ತಾಳೆ. ಮನೆಯಲ್ಲಿನ ಧಾರ್ಮಿಕ ಆವರಣ, ಹೆತ್ತವರ ಆಗಲಿಕೆ ತಂದಿದ್ದ ಅನಾಥಭಾವ ಇವು ಅವಳ ಬದುಕಿನಲ್ಲಿ ದೈವಭಕ್ತಿಯ ಕಡೆಗೆ ಒಲಿಯುವಂತೆ ಮಾಡಿರಬೇಕು. ಅವಳಿಗೆ ೧೨ ವರ್ಷಗಳಿರುವಾಗಲೇ ಮಲೆಬೆನ್ನೂರಿನ ಶಾನುಭೋಗ ಕೃಷ್ಣಪ್ಪನವರ ಮಗ ತಿಪ್ಪರಸ ನೊಂದಿಗೆ ಮದುವೆಯಾಗುತ್ತದೆ. ಪಾಲಕರ ಒತ್ತಾಯದ ಮೇರೆಗೆ ಮದುವೆಯಾದ ಗಿರಿಯಮ್ಮ ನಂತರ ತನ್ನ ಗಂಡನಿಗೆ ಬೇರೆ ಮರುಮದುವೆ ಮಾಡಿ ಕೊನೆಯವರೆಗೂ ವಿರಾಗಿಣಿಯಾಗೇ ಉಳಿಯುತ್ತಾಳೆ. ಗಂಡನ ಮನೆಯಲ್ಲಿಯೇ ಭಕ್ತಿ ಸಾಧನೆಗೆ ತೊಡಗುತ್ತಾಳೆ. ಕುಟುಂಬದವರಂದ ತೊಡಕುಗಳು ಬಂದರೂ ಕೂಡ ಅವುಗಳ ಮೆಟ್ಟಿನಿಂತು ಭಕ್ತಿ ಸಾಧನೆಯ ಕಡೆ ಮುನ್ನೆಡೆಯುತ್ತಾಳೆ. ಆಕೆ ತನ್ನ ಅಪ್ರತಿಮ ದೈವಭಕ್ತಿಯಿಂದ ಗೆದ್ದು ನಿಂತ ರೀತಿ ಇವುಗಳ ಬಗ್ಗೆ ಅನೇಕ ಪವಾಡ ಸದೃಶ ಕಥೆಗಳು ಪ್ರಚಲಿತವಿದೆ.

ತಲೆಯಲ್ಲಿ ನಿರಿ ಟೊಂಕದಲ್ಲಿ ಮುಡಿ
ಮೊಣಕಾಲಲ್ಲಿ ಕಿವಿಯೋಲೆ ಕಂಡೆ
ಹರವಸದ ಉಡುಗೆ,ಚಿಣ್ಣಂಗೆ ಹರವಸನ ಉಡುಗೆ
ಏಕಾಂತದಲ್ಲಿ ಕೂಡಿ,ಮುಖವ ಕಂಡು
ಕಾಣದ ಚನ್ನಮಲ್ಲಿಕಾರ್ಜುನನ ನೆರೆವ ಪರಿ ಕರ ಹೊಸತು.

ಅಕ್ಕಮಹಾದೇವಿ ತನ್ನ ಸಂಸಾರವೆಂಬ ಗಡಿಯನ್ನು ದಾಟಿ ಬೇರೊಂದು ಲೋಕದ ಅಂದರೆ ಅಲೌಕಿಕ ಕಡೆ ಮುಖ ಮಾಡಿ ತನ್ನ ಭಕ್ತಿ ಮಾರ್ಗವನ್ನು ಕಂಡುಕೊಂಡವಳು. ಅದರೆ ಹೆಳವನಕಟ್ಟೆ ಗಿರಿಯಮ್ಮ ಈಕೆ ತನ್ನ ಸಂಸಾರದಲ್ಲೇ ಇದ್ದುಕೊಂಡು ತನ್ನ ಸಂಸಾರದ ಸದಸ್ಯರ ನಡುವೆಯು ತನ್ನ ಇಷ್ಟದೈವವನ್ನು ಪೂಜೆ ಮಾಡುತ್ತಾ ತನ್ನ ಭಕ್ತಿಯಿಂದ ಉನ್ನತ ಸ್ಥಾನವನ್ನು ಪಡೆದುಕೊಂಡವಳು ಈಕೆ ಆಗಿದ್ದಾಳೆ.

ಮಹಾದೇವಿಯಕ್ಕನ ಬಾಲ್ಯ ಮತ್ತು ವಿದ್ಯಾಭ್ಯಾಸ ಕುರಿತಂತೆ ಪ್ರಾಚೀನ ಕೃತಿಗಳಲ್ಲಿ ವಿವರಗಳಿಲ್ಲದದ್ದರೂ ಅಕ್ಕಳು ಶಿವ ಭಕ್ತರಾದ ತಂದೆತಾಯಿಯ ಮಗಳಾಗಿ ಸುಸಂಸ್ಕೃತ ಕುಟುಂಬದಲ್ಲಿ ಧರ್ಮಶಾಸ್ತ್ರ, ಸಾಹಿತ್ಯ, ತತ್ವಜ್ಞಾನದ ಪ್ರೌಢ ವಿದ್ಯಾಭ್ಯಾಸ ನಡೆಸಿದಂತೆ ತೋರುತ್ತದೆ. ಅಕ್ಕನ ವಚನಗಳಲ್ಲಿ ಕಂಡುಬರುವ ಸಂಸ್ಕೃತ ಕಾವ್ಯ ಪುರಾಣಗಳ ಉಲ್ಲೇಖಗಳು ಆಕೆಯ ಶಾಸ್ತ್ರಾಧ್ಯಯನ ಮತ್ತು ತತ್ವಜ್ಞಾನದ ತಿಳಿವಳಿಕೆಯನ್ನು ಪ್ರಕಟಿಸುತ್ತದೆ.

ಹೆಳವನಕಟ್ಟೆ ಗಿರಿಯಮ್ಮಳು ಶಿಕ್ಷಣವನ್ನು ಕಲಿತ್ತಿದ್ದಳೆಂದು ಹೇಳಲು ಆಗುವುದಿಲ್ಲ. ಅವಳು ಒಂದು ಕಡೆ ತನ್ನ ಕೀರ್ತನೆಯಲ್ಲೆ ಹೇಳಿಕೊಂಡಿದ್ದಾಳೆ. ಪ್ರಾಯಶಃ ಗುರುಮುಖದಿಂದ ಕ್ರಮವಾಗಿ ವಿದ್ಯಾಭ್ಯಾಸವಾಗಿರಲಾರದು. ಪೂರ್ವಕಾವ್ಯಗಳ ಪುರಾಣೇತಿಹಾಸಗಳ ಒಳ್ಳೆಯ ಪರಿಚಯವಿದ್ದಂತೆ ತೋರುತ್ತದೆ. ಇವಳ ಕಾವ್ಯಶಕ್ತಿಯೂ, ನೈಸರ್ಗಿಕವೂ, ಪ್ರಾಸಾದಿಕವೂ ಆಗಿದ್ದು ಭಾಗವತ ಕವಿಗಳಲ್ಲಿ ಕುಮಾರವ್ಯಾಸನನ್ನು ನೆನಪಿಗೆ ತರುತ್ತಾಳೆ.

ಲೌಕಿಕ ವಿವಾಹವನ್ನು ತಿರಸ್ಕರಿಸಿದ ಅಕ್ಕಮಹಾದೇವಿ ವಿರಾಗಿಯಾಗಿ ಸಾಂಪ್ರದಾಯಿಕ ಸಮಾಜದ ವ್ಯವಸ್ಥೆಗೆ ಗುರಿಯಾದಂತವಳು. ತನ್ನ ಶಿವಭಕ್ತಿ ಸಾಧನೆಗೆ ಅನುಕೂಲವಲ್ಲದ ವೈವಾಹಿಕ ಪ್ರಸ್ಥಾಪವನ್ನು ಒಪ್ಪದೇ ವಿರಾಗಿಣಿಯಾಗಿ ಆಧ್ಯಾತ್ಮ ಸಾಧನೆಯಿಂದ ಶ್ರೇಷ್ಠ ಅನುಭಾವಿಯದವಳು. ಆದರೆ ಇದಕ್ಕೆ ಹೆಳವನಕಟ್ಟೆ ಗಿರಿಯಮ್ಮ ತದ್ವಿರುದ್ದ. ಬಹುಶಃ ಆಕೆಗೆ ೧೨ ವರ್ಷವಿರುವಾಗಲೇ ವಿವಾಹವಾಗಿ ವಿರಾಗಿಯಾದವಳು. ಆಕೆ ಬಾಲ್ಯದಲ್ಲಿ ತೀವ್ರತರದ ಹೆತ್ತವರ ಆಗಲಿಕೆಯ ನೋವು, ಒಂಟಿತನ ಕಾಡುತ್ತಿತ್ತು. ಪರಿಣಾಮವಾಗಿ ಮನಸ್ಸು ಕೂಡ ಭಕ್ತಿಯ ಕಡೆ ವಾಲತೊಡಗಿತ್ತು. ಅಷ್ಟೇನೂ ಅರಿವಿರದೇ ವಿವಾಹವಾದ ಗಿರಿಯಮ್ಮ ಅಷ್ಟೇರಲ್ಲೇ ತನ್ನ ಪೂಜೆಗೆ ಭಂಗ ಬರುವುದೆಂದು ತಿಳಿದು ತನ್ನ ಗಂಡನಿಗೆ ಮರುಮದುವೆ ಮಾಡಿ ಭಕ್ತಿ ಸಾಧನೆಯ ಮಾಡಲು ಪೂಜಾ ಕೈಂಕರ್ಯದಲ್ಲಿ ಮಗ್ನನಾದಳು. ಅಕ್ಕ ಮತ್ತು ಗಿರಿಯಮ್ಮ ಭಕ್ತಿ ಸಾಧನೆಯ ಮಾರ್ಗ ಕಂಡುಕೊಳ್ಳುವಲ್ಲಿ ತೆಗೆದುಕೊಂಡಂತಹ ನಿಲುವುಗಳು ಮತ್ತು ಪ್ರಯಾಣಿಸಿದ ದಾರಿ ಬೇರೆಯೇ ಆಗಿರುವುದನ್ನು ಗಮನಿಸಬಹುದು.

**ಅಡಿ ಟಿಪ್ಪಣಿ**

೧ ಹೆಚ್.ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ ೨೦೦೬ ಪುಟ: ೮೭

೨ ಅದೇ ಪುಟ: ೧೯೫

೩ ಅದೇ ಪುಟ: ೭೪

೪ ಡಾ॥ ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ೧೯೮೮ ಪುಟ: ೧೫೨

೫ ಎಂ.ಚಂದ್ರಪೂಜಾರಿ, ಸಂಶೋಧನಾ ಜವಾಬ್ದಾರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಪುಟ: ೬೮

೬ ಹೆಚ್.ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ ೨೦೦೬ ಪುಟ: ೮೨

೭ ಅದೇ ಪುಟ: ೮೨

೮ ಅದೇ ಪುಟ: ೧೯೪

೯ ಅದೇ ಪುಟ: ೧೯೨

೧೦ ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ೧೯೮೭ ಪುಟ: ೧೨

೧೧ ಶೂನ್ಯ ತತ್ವ ವಿಕಾಸ ಮತ್ತು ಸಂಪಾದನೆ ೧೯೭೫ ಪುಟ: ೧೦೧

೧೨ ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ೧೯೮೭, ಪುಟ:೧೩

## ಅಧ್ಯಾಯ: ೩

## ಭಕ್ತಿ ಭಂಡಾರಿಯಾಗಿ ಅಕ್ಕಮಹಾದೇವಿ–ಹೆಳವನಕಟ್ಟೆ ಗಿರಿಯಮ್ಮ.

ಕರಣಮೀಸಲಾಗಿ ನಿನಗರ್ಪಿತವಾಯಿತ್ತು, ಆನೊಂದರಿಯೆನಯ್ಯ!
ಎನ್ನಗತಿ ನೀನಾಗಿ, ಎನ್ನಮತಿ ನೀನಾಗಿ, ಪ್ರಾಣ ನಿಮಗರ್ಪಿತವಾಯಿತ್ತು,
ನೀರಿಲ್ಲದ ಪೆರತೊಂದ ನೆನೆದೊಡೆ ಆಣೆ ನಿಮ್ಮಾಣೆ ಚನ್ನಮಲ್ಲಿಕಾರ್ಜುನ[೧]

–ಅಕ್ಕಮಹಾದೇವಿ

ಮಾಡು ಹರಿಸೇವೆಯನ್ನು ಮನದಣಿಯೇ ಬೇಡು, ಹರಿ ಭಕ್ತಿಯನ್ನು
ಕೂಡು ಹೆಳವನಕಟ್ಟೆಯ ವೆಂಕಟನಬೇಡಿ ಮುಕ್ತಿಯನ್ನು ಪಡೆಯೇ ಮನವೇ[೨]

–ಹೆಳವನಕಟ್ಟೆ ಗಿರಿಯಮ್ಮ

ಭಕ್ತಿಯ ಸಾಗರದಲ್ಲಿ ಮುಳುಗಿದವರು ಸಾಹಿತ್ಯದ ಲೋಕದಲ್ಲೂ ಮುಳುಗಿರುತ್ತಾರೆ. ತಮ್ಮ ವಚನ ಮತ್ತು ಕೀರ್ತನೆ ಇನ್ನಾವುದೋ ಸಾಹಿತ್ಯದ ಮೂಲಕ ತಮ್ಮ ಇಷ್ಟ ದೇವರನ್ನು ಪ್ರಾರ್ಥಿಸುತ್ತಾ ಇರುತ್ತಾರೆ. ಅದರಂತೆ ಅಕ್ಕಮಹಾದೇವಿ ಹಾಗೂ ಹೆಳವನಕಟ್ಟೆ ಗಿರಿಯಮ್ಮರೂ ಕೂಡ ಭಕ್ತಿಯ ಪಾರಮ್ಯತೆಯನ್ನು ಮೆರೆಯುತ್ತಾರೆ. ಸಂತಾನೋತ್ಪತ್ತಿಯ ಸಾಧನವಾಗಿದ್ದ ಮಹಿಳೆಯರು ತನ್ನ ಭಕ್ತಿ ಸಾಹಿತ್ಯದ ಮೂಲಕ ಲೋಕ ಪ್ರಸಿದ್ಧಿಯಾದರು. ಭಕ್ತಿ ಚಳುವಳಿಯಲ್ಲಿ ಕಟ್ಟುಪಾಡು ಕಡಿಮೆ, ಹಾಗಾಗಿ ಹೆಣ್ಣು ಮಕ್ಕಳು ಸಾಹಿತ್ಯ ಲೋಕದಲ್ಲಿ ಮತ್ತೊಮ್ಮೆ ಮಿನುಗಲು ಭಕ್ತಿ ಚಳುವಳಿಯೇ ಬರಬೇಕಾಯಿತು. ಕರ್ನಾಟಕದಲ್ಲಿ ೧೩ನೇ ಶತಮಾನದಿಂದಲೇ ದಾಸ ಸಾಹಿತ್ಯದ ಬೆಳವಣಿಗೆ ಗೋಚರಿಸಿದರೂ ಮಹಿಳೆಯರು ಆ ಕಾಲಕ್ಕೆ ದಾಸ ಸಾಹಿತ್ಯ ನಿರ್ಮಾಣದಲ್ಲಿ ಪಾಲ್ಗೊಂಡಿರುವಂತೆ ಕಂಡುಬರುವುದಿಲ್ಲ. ಲಿಂಗ ಭೇದದಿಂದಾಗಿ ಹೆಣ್ಣು ಮಕ್ಕಳು ಬರವಣಿಗೆ ಅವಕಾಶವನ್ನು ಪಡೆಯಲಾಗದಿದ್ದಾಗ ಭಕ್ತಿ ಚಳುವಳಿಗಳು ಜಾತಿ ಭೇದ, ಲಿಂಗ ಭೇದಗಳನ್ನು ಮೀರಿ ಹೆಣ್ಣುಮಕ್ಕಳಿಗೂ ಅವಕಾಶ ಕಲ್ಪಿಸಿದವು. ಪಾರಮಾರ್ಥ ಸಾಧನೆಗೆ ಲಿಂಗ ವರ್ಗಗಳ ಜಾತಿ ಮತಗಳ ಭೇದವಿಲ್ಲ. ಎಲ್ಲರೂ ಇದಕ್ಕೆ ಅರ್ಹರೆಂದು ಭಕ್ತಿ ಚಳುವಳಿ ಪ್ರತಿಪಾದಿಸಿತು. ಹೀಗಾಗಿ ದಾಸಸಾಹಿತ್ಯದ ಅಂತಿಮ ಘಟ್ಟದಲ್ಲಿ ಅಂದರೆ ೧೮ನೇ ಶತಮಾನದಲ್ಲಿ ಮಹಿಳೆಯರು ಸಾಹಿತಿಕ ರಚನೆಯಲ್ಲಿ ತೊಡಗಿಕೊಂಡರು. ರಾಮಾಯಣ ಮಹಾಭಾರತ, ಭಾಗವತ ಮೊದಲಾದವುಗಳ ಶರಣ ದಾಸ ರಚನೆಗಳ ಹಾಡುಗಾರಿಕೆ, ಹರಿಯ ಮೇಲಿನ ಭಕ್ತಿ ಇದೇ ಮೊದಲಾದ ಅಂಶಗಳ ಪ್ರಭಾವ ಬೀರಿದ ಪರಿಣಾಮವಾಗಿ ಕೆಲವಾದರೂ ಮಹಿಳೆಯರು ತಮ್ಮ ಭಾವನೆಗಳು ಅಭಿವ್ಯಕ್ತಿಗೆ ಹಂಬಲಿಸಿದರು.

ವಚನ ಚಳುವಳಿಯು ಭಕ್ತಿಗೆ ಚಲನಶೀಲ ಸ್ವರೂಪ ತಂದು ಚಾರಿತ್ರಿಕ ಮಹತ್ವ ಪಡೆದಿವೆ. ಅರಮನೆ ಮತ್ತು ದೇವಾಲಯವನ್ನು, ರಾಜ ಮತ್ತು ದೈವವನ್ನು ಸಮೀಕರಿಸುವವರು ಸಮಾಜದ ಸ್ಥಿರತೆಗೆ ಭಕ್ತಿ ಪ್ರತಿಪಾದನೆಯ ಮತ ಪೂರಕವಾಗಿರುವುದನ್ನು ವಿವರಿಸಿದ್ದಾರೆ. ಭಕ್ತಿಯಲ್ಲಿ ನಿಷ್ಠೆಯೇ ಪ್ರಧಾನವೆಂಬ ಪ್ರತಿಪಾದನೆಯ ಹಿನ್ನೆಲೆಯಲ್ಲಿ ರಾಜನ ಸ್ಥಿರತೆಗೂ, ಭಕ್ತಿಯೇ ಸಾಧನವಾಗುವ ಸೂಚನೆಗಳನ್ನು ಈ ವಿಚಾರ ಒಳಗೊಂಡಿದೆ[೩]. ಕೃಷಿಕ ಜಮೀನ್ದಾರನಿಗೂ, ಪಾಳೆಗಾರನಿಗೂ, ಸಾಮಂತನಿಗೂ, ಸಾಮಂತರಾಜನಿಗೂ ನಿಷ್ಠೆಯಿಂದರಲು ಭಕ್ತಿ ಪರಿಕಲ್ಪನೆ ಸಹಾಯಕವಾಗುತ್ತದೆಂಬ ಅವರ ಅಭಿಪ್ರಾಯದ ಸಾರ.

ವಚನಕಾರರು ಎಲ್ಲಾ ಜಾತಿ ವರ್ಗಗಳನ್ನು ಒಂದುಗೂಡಿಸಲು ಪ್ರಯತ್ನಿಸಿದ್ದು ನಿಜವಾದರೂ ಅದಕ್ಕೆಲ್ಲಾ ಕೇಂದ್ರವೆಂದರೆ 'ಶಿವಭಕ್ತಿ' ಶಿವಭಕ್ತನಲ್ಲದವನು ರಾಜನಾದರೂ ಒಂದೇ, ಸಾಮಾನ್ಯನಾದರೂ ಒಂದೇ. ಭವ್ಯ ಬಗ್ಗೆ ಪ್ರೀತ್ಯಾದರಗಳಿಲ್ಲದ ನಿಲುವು ತೆಗೆದುಕೊಂಡ ವಚನ ಚಳುವಳಿ ಭಕ್ತಿಯನ್ನು ಅದರಲ್ಲೂ ಶಿವಭಕ್ತಿಯನ್ನು ಕೇಂದ್ರವಾಗಿಸಿಕೊಂಡಿತು. ಯೇಸುಕ್ರಿಸ್ತನನ್ನು ಒಪ್ಪುವವರೆಲ್ಲಾ ಕ್ರೈಸ್ತರಾದಂತೆ ಶಿವಭಕ್ತರೆಲ್ಲ ಒಂದಾಗುತ್ತಾ ಬಂದರು. ವ್ಯಕ್ತಿಯಲ್ಲೇ ಭಕ್ತಿಯ ಬೀಜ ಮತ್ತು ಬೆಳೆಯನ್ನು ಕಾಣಬಯಸಿದ ವಚನ ಚಳುವಳಿ, ಭಕ್ತಿಯ ಖಾಸಗೀಕರಣ ಮತ್ತು ಕೇಂದ್ರಿಕರಣಗಳ ವೈರುಧ್ಯವನ್ನು ಒಡಲೊಳಗೆ ಇಟ್ಟುಕೊಂಡೇ ಬೆಳೆಯಿತು. ಏಕದೇವೋಪಾಸಾನೆಯ ತತ್ವಕ್ಕೆ ಶಿವನೇ ಕೇಂದ್ರ, ಶಿವನೇ ಶಕ್ತಿ, ಈ ನಿಟ್ಟಿನಲ್ಲಿ ಅಕ್ಕಮಹಾದೇವಿ-ಹೆಳವನಕಟ್ಟೆ ಗಿರಿಯಮ್ಮ ತಮ್ಮ ಸಾಹಿತ್ಯ ರಚನೆಗೆ ಸ್ಫೂರ್ತಿಯಾದರು, ಶಿವ ಮತ್ತು ವಿಷ್ಣುವಿನ ಸ್ವರೂಪಿಯಾದ ಚನ್ನಮಲ್ಲಿಕಾರ್ಜುನ ಮತ್ತು ಹೆಳವನಕಟ್ಟೆರಂಗ. ಅವರ ಒಂದು ಧ್ಯಾನದಲ್ಲೇ ಸಾಹಿತ್ಯಿಕ ರಚನೆಯನ್ನು ಮಾಡಿ ಭಕ್ತಿಯ ಔನತ್ಯಕ್ಕೆ ಏರಿದರು.

ಲಿಂಗವನ್ನೇ ಲಿಂಗೈಕ್ಯವೆನ್ನೆ!
ಸಂಗವೆನ್ನ ನಿಸ್ಸಂಗವೆನ್ನೆ!
ಆಯಿತ್ತೆನ್ನೆ ಆಗದೆನ್ನೆ!
ನಾನೆನ್ನೆ ನೀನೆನ್ನೆ![೮]

ಶಿವಭಕ್ತಿಯಲ್ಲಿ ಅಕ್ಕಮಹಾದೇವಿಯು ಅನುರಕ್ತಳಾಗುವ, ಶಿವನಲ್ಲಿನ ಭಕ್ತಿಯ ಪರಕಾಯದ ಪ್ರವೇಶ ಮಾಡುವ ಅಕ್ಕಳ ಮನೋಧರ್ಮವನ್ನು ವಿಶ್ಲೇಷಿಸಲಾಗಿರುವ ವಚನವನ್ನು ನೋಡಬಹುದು. **ಶ್ರೀಗುರುಲಿಂಗದೇವರು ತಮ್ಮ ಹಸ್ತವತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಲೇ ಎನ್ನ ಭವಂ ನಾಸ್ತಿಯಾಯಿತು, ಎನ್ನ ತನ್ನಂತೆ ಮಾಡಿದ, ಎನಗೆ ತನಗೆ ತೆರೆಪಿಲ್ಲದಂತೆ ಮಾಡಿ ತೋರಿದನು ನೋಡಾ,** ಎಂದು ತನ್ನ ಸರ್ವಾಂಗದೊಳ ಹೊರಗೆ ಲಿಂಗಚೈತನ್ಯವನ್ನು ಜಾಗರಿಸಿದ ಗುರುಲಿಂಗದೇವರನ್ನು ನೆನೆದಿದ್ದಾಳೆ.

ನೀನೆ ಗತಿಯೆಂದು ಬಂದ ಭಕ್ತನ ಕ
ಣ್ಣೂನವ ತಿದ್ದಿ ನಿಜವ ತೋರಿಸಯ್ಯ
ದೀನದಯಾಳು ಹೆಳವನಕಟ್ಟೆ ರಂಗಯ್ಯ
ದಾನಿ ಎನ್ನೊಡೆಯ ದೊಡ್ಡವನೆಂದು ಹೊಗಳುವೆ[೯]

ಗಿರಿಯಮ್ಮಳು ತನ್ನ ಹೆಳವನಕಟ್ಟೆ ರಂಗನಾಥನಲ್ಲಿ ತನ್ನ ಭಿನ್ನಪವನ್ನು ಬಂದ ಭಕ್ತರಿಗೆ ನೀನೆ ಗುರುವಾಗಿ ದಾರಿ ದೀಪವಾಗು, ಎಂದು ತನ್ನ ಹಾಡಿನ ಮೂಲಕ ಪ್ರಾರ್ಥಿಸುತ್ತಿದ್ದಾಳೆ.

೧೨ನೇಯ ಶತಮಾನದಲ್ಲಿ ಜಡ್ಡುಗಟ್ಟಿದ ಸಮಾಜದಲ್ಲಿ ಕುರುಡು ಸಂಪ್ರದಾಯ, ಆಚರಣೆ, ಮೂಢ ಸಂಸ್ಕೃತಿ, ಅನಾಚಾರವಿದ್ದಂತಹ ಅಂಧಕಾರದಿಂದ ತಮ್ಮ ಭಕ್ತಿ, ಪ್ರೀತಿ, ವಿಶ್ವಾಸದ ಬೆಳಕನ್ನು ಮೂಡಿಸುವ ಪ್ರಯತ್ನವನ್ನು ಅಕ್ಕಮಹಾದೇವಿ ಮಾಡಿದಳು. ಅವ್ಯವಸ್ಥೆಯಿಂದ ಕೂಡಿದ ಸಮಾಜವನ್ನು ವ್ಯವಸ್ಥೆಗೊಳಿಸಿ ಹೊಸ ಸಮಾಜವನ್ನು ಕಟ್ಟುವ ಕೆಲಸ ಆ ಕಾಲದಲ್ಲಿ ನಡೆದು, ಅದು ಕ್ರಾಂತಿಯ ಕಾಲ ಎನಿಸಿಕೊಂಡಿತು. ಧಾರ್ಮಿಕ ಮತ್ತು ಸಾಮಾಜಿಕ ಪರಿವರ್ತನೆಯ ಪರ್ವಕಾಲವಾಗಿತ್ತು. ಅದೇ ರೀತಿಯಾಗಿಯೆ ಹೆಳವನಕಟ್ಟೆ ಗಿರಿಯಮ್ಮ ಕೂಡ ಹಾಡಿದಂತ ಹಾಡುಗಳು ಸಾಮಾನ್ಯ ಜನರು ಸತ್ಪಥದಲ್ಲಿ

ನಡೆದು ಹರಿಭಕ್ತಿಯಿಂದ ಬದುಕನ್ನು ಶುದ್ದಗೊಳಿಸಿಕೊಳ್ಳಲಿ ಎಂಬ ಉದ್ದೇಶದಿಂದಲೇ ಅಂದಿನ ಕಾಲಘಟ್ಟದಲ್ಲಿ ತಮ್ಮ ಭಕ್ತಿ ಪಾರಮ್ಯತೆಯನ್ನು ಮೆರೆದರು.

ಹೆಣ್ಣಿನ ಜೀವನವನ್ನು ಬೇಂದ್ರೆಯವರು ಕತೆಯಾದಳು ಹುಡುಗಿ, ಕವನದಲ್ಲಿ ಹೇಳುವಂತೆ ಪಾರ್ವತಮ್ಮನವರು ಅವಳ ಬದುಕಿನ ಮುಖ್ಯ ಮಜಲುಗಳನ್ನು ಹೇಳುತ್ತಾರೆ.

ಏಕಳುವೆ ಎಲೆಮಗುವೆ ಗುಲಗಂಜಿಗಾಗಿ
ಏಕಳುವೆ ಬಾಲೆಕರ್ಪೂರದ ಬೊಂಬೆಗಾಗಿ
ಏಕಳುವೆ ಎಲೆಯುವತಿ ಬಣ್ಣದಾ ಮನೆಗಾಗಿ

ಹೆಣ್ಣು ಅಳುವುದು ಜನ್ಮಸಿದ್ಧ ನಿಯಮ, ಎಂಬ ವಿಚಾರವನ್ನು ವ್ಯಂಗ್ಯವಾಗಿ ಹೇಳುತ್ತ ಅವಳ ಬದುಕಿನ ಒಂದೊಂದು ಹಂತದಲ್ಲಿಯೂ ಅವಳು ಒಂದೊಂದು ಕಾರಣಕ್ಕೆ ಅಳುತ್ತಾಳೆ. ಮಗುವಿದ್ದಾಗ ಗುಲಗಂಜಿಗಾಗಿ ಅತ್ತರೆ, ಬಾಲೆಯಾದಾಗ ಕರ್ಪೂರದ ಬೊಂಬೆಗಾಗಿ, ಕೊನೆಗೆ ಅವಳು ಅಳುವುದು ಬಣ್ಣದ ಮನೆಗೆ, ಆದರೆ ಇಲ್ಲಿ ಅಕ್ಕ ಮತ್ತು ಗಿರಿಯಮ್ಮನ ಶೈಶವ, ಬಾಲ್ಯ, ಯೌವ್ವನ, ವೃದ್ದಾಪ್ಯ ಜೀವನದ ಮಜಲುಗಳಲ್ಲಿ ವಿರಹದ ಭಕ್ತಿಗಾಗಿ ಹಂಬಲಿಸಿದರು. ಅವರಿಗೆ ಕರ್ಪೂರದ ಬೊಂಬೆ ಬೇಕಾಗಿರಲಿಲ್ಲ. ತಮ್ಮ ಇಷ್ಟದೇವರ ಜೀವದ ಬೊಂಬೆಗಾಗಿ ಹಾತೊರೆಯುವ ತುಡಿಕೆಯನ್ನು ತೋರ್ಪಡಿಸಿದರು.

ಉಡುತಡಿಯಲ್ಲಿ ಜನಿಸಿ, ಕಲ್ಯಾಣದಲ್ಲಿ ಕವಲೊಡೆದು, ಶ್ರೀಶೈಲದ ಕದಳಿಯಲ್ಲಿ ಕಣ್ಮರೆಯಾದ ಅಕ್ಕಮಹಾದೇವಿಯ ಶಿವಭಕ್ತಿ ಸಾಗಿದ ಬಗ್ಗೆ ಮತ್ತು ಹೆಳವನಕಟ್ಟೆ ಗಿರಿಯಮ್ಮಳು ಬಾಲ್ಯದ ಮೈಲಾರಲಿಂಗನಿಂದ ಹೆಳವನಕಟ್ಟೆರಂಗನ ಕಡೆಗೆ ಒಲಿದುದರ ಬಗ್ಗೆ ಕೆಳಕಂಡ ಘಟ್ಟಗಳಲ್ಲಿ ನೋಡಬಹುದು.

**<u>ಅ)ಬಾಲ್ಯದ ಜೀವನ:-</u>**

ಮಹಾದೇವಿಯಕ್ಕನನ್ನು ಕುರಿತು ಕೃತಿ ರಚಿಸಿದ ಪ್ರಾಚೀನ ಕವಿಗಳೆಲ್ಲರೂ ಆಕೆಯ ಜನನವನ್ನು ದೈವಿಸಂಕಲ್ಪವಾಗಿ ಭಾವಿಸಿದ್ದಾರೆ. ಮಹಾದೇವಿಯಕ್ಕ ಪಾರ್ವತಿಯ ಓಲಗದ ರುದ್ರಕನ್ನಿಕೆ, ಪಾರ್ವತಿಯ ಸಾತ್ವಿಕ ಕಳೆ, ಭೂಲೋಕದಲ್ಲಿ ನಿಷ್ಕಾಮಭಕ್ತಿಯ ಮೇಲ್ಮೆಯನ್ನು ಪ್ರಕಟಿಸಲು ಅವತರಿಸಿದ ಮೃಢನರಸಿಯಂಶ ಎನ್ನುವುದು ಕವಿಗಳ ಹೇಳಿಕೆಯಾಗಿದೆ.

ಅಕ್ಕಮಹಾದೇವಿಯ ತನ್ನ ಬಾಲ್ಯದಲ್ಲಿ ತನಗೆ ಇಷ್ಟಲಿಂಗ ದೀಕ್ಷೆಯನ್ನು ಆಧ್ಯಾತ್ಮ ಸಾಧನೆಗೆ ದಾರಿತೋರಿದ ಸದ್ಗುರುವಿನ ಕೃಪೆಯನ್ನು ಹಲವಾರು ವಚನಗಳಲ್ಲಿ ಅನನ್ಯ ಭಕ್ತಿ, ಶ್ರದ್ದೆಯಿಂದ ಸ್ಮರಿಸಿದ್ದಾಳೆ. ಗುರುವಿನಿಂದ ಶಿಷ್ಯರು ಪಡೆದುಕೊಳ್ಳುವ ಇಷ್ಟಲಿಂಗದ ದೀಕ್ಷೆಯನ್ನು ವಿವರಿಸುವ ಒಂದು ವಚನವನ್ನು ಸ್ವಾನುಭವ ವಿವರಣೆಯಾಗಿ ಕಂಡುಬರುತ್ತದೆ.

ಸದ್ಗುರು ಸ್ವಾಮಿ ಶಿಷ್ಯಂಗೆ ಅನುಗ್ರಹಮಾಡುವಲ್ಲಿ
ತಚ್ಚಿಷ್ಯನ ಮಸ್ತಕದ ಮೇಲೆ ತನ್ನ ಹಸ್ತವನಿರಿಸಿದೊಡೆ
ಲೋಹದ ಮೇಲೆ ಪರುಷ ಬಿದ್ದಂತಾಯಿತ್ತಯ್ಯ
ಒಪ್ಪುವ ಶ್ರೀ ವಿಭೂತಿಯ ನೊಸಲಿಂಗೆ-ಪಟ್ಟವ ಕಟ್ಟಿದಡೆ
ಮುಕ್ತಿರಾಜ್ಯದ ಒಡತನಕ್ಕೆ ಪಟ್ಟವಕಟ್ಟಿದಂತಾಯಿತ್ತಯ್ಯಾ[5]

ಚೆನ್ನಮಲ್ಲಿಕಾರ್ಜುನನ ನಿಜವ ತೋರಿದ ಶ್ರೀ ಗುರುವಿನ ಮಹಿಮೆಯನ್ನು ಭಾವಪರವಶಳಾಗಿ ಕೊಂಡಾಡಿದ್ದಾಳೆ. ಶಿವಭಕ್ತರ ಮಗಳಾಗಿ ಸುಸಂಸ್ಕೃತ ಕುಟುಂಬದಲ್ಲಿ ಧರ್ಮಶಾಸ್ತ್ರ, ಸಾಹಿತ್ಯ, ತತ್ವಜ್ಞಾನದ ಪ್ರೌಢ ವಿದ್ಯಾಭ್ಯಾಸ ನಡೆಸಿದಂತೆ ತೋರುತ್ತದೆ.

ನಿರ್ಮಲ ಸುಮತಿಯರಿಗೆ ಮಕ್ಕಳಿಲ್ಲದ ಕೊರತೆಯೊಂದು ಮಾತ್ರ ಕಾಣುತ್ತಿತ್ತು. ಊರ ಮಲ್ಲಿಕಾರ್ಜುನನ ದೇವಾಲಯದಲ್ಲಿ ಅವರು ಹೆಣ್ಣು ಮಗುವಿಗಾಗಿ ಸತತ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಒಂದು ಸಲ ಅವರು ಪಾರ್ವತಿಯ ಪೂಜೆಯಲ್ಲಿ ತೊಡಗಿದ್ದಾಗ ಪಾರ್ವತಿಯ ಮುಡಿಯಿಂದ ಪ್ರಸಾದವಾಯಿತು. ಆ ಹೂವನ್ನು ಎತ್ತುಕೊಂಡು, ತಮ್ಮ ಬಯಕೆ ಫಲಿಸಿತೆಂದು ದಂಪತಿಗಳು ಕುಣಿದಾಡಿದರು. ಕೆಲವು ತಿಂಗಳ ನಂತರ ಸುಮತಿ ಹೆಣ್ಣು ಕೂಸನ್ನು ಹೆತ್ತಳು.

ಗಂಡ ಹೆಂಡರಿಗೆ ಪಾರ್ವತಿಯೇ ತಮ್ಮ ಮನೆಯಲ್ಲಿ ಅವತರಿಸಿದ ಅನುಭವವಾಯಿತು. ಆನಂದವಾಯಿತು. ಮಗು ತುಂಬಾ ಮುದ್ದಾಗಿತ್ತು. ನೋಡಿದವರ ಕಣ್ಣು ತುಂಬುತ್ತಿತ್ತು. ತಂದೆ ತಾಯಿಗಳ ಸಂತೋಷದಲ್ಲಿ ಊರವರೆಲ್ಲರೂ ಭಾಗಿಗಳಾದರು. ಬಂಧು ಬಳಗದವರೆಲ್ಲಾ ಸೇರಿ ಮನೆಯಲ್ಲಿ ನಿತ್ಯವೂ ಹಬ್ಬವಾಯಿತು. ಮಗುವನ್ನು ನೋಡಬಂದವರೆಲ್ಲಾ ಸಕ್ಕರೆಯನ್ನು ಕೊಂಡು ಹೋದರು.

ದಿನಕಳೆದಂತೆಲ್ಲಾ ಶುಕ್ಲಪಕ್ಷದ ಚಂದ್ರನ ಹಾಗೆ ಮೈಕೈ ತುಂಬಿಕೊಂಡು ಮಗು ಬೆಳೆಯಲಾರಂಭಿಸಿತು. ನಿರ್ಮಲ ಸುಮತಿಯರು ಶಿವಲಿಂಗ ಪ್ರಸಾದವೆಂದು ಪ್ರೀತಿಯಿಂದ ಮಗುವನ್ನು ಬೆಳೆಸಿದರು. ಮಗುವಿನ ನಡೆನುಡಿಗಳು ಆಟಪಾಠಗಳು ಅವರನ್ನು ಸಂತೋಷ ಸಾಗರದಲ್ಲಿ ಮುಳುಗಿಸಿದವು. ಪಾರ್ವತಿಯ ವರಪ್ರಸಾದವೆಂದು ಜನಿಸಿದ ಮಗುವಿಗೆ **'ಮಹಾದೇವಿ'** ಎಂಬ ಹೆಸರಿಟ್ಟರು. ಮಗು ಮಹಾದೇವಿ 'ಶಿವ' ಎಂಬ ಮಾತು ಕಿವಿಯ ಮೇಲೆ ಬಿದ್ದೊಡನೆ ಕಣ್ಣರಳಿತ್ತಿತ್ತಂತೆ, ಕಿಲಕಿಲನೆ ನಗುತ್ತಿತ್ತಂತೆ. ಅದಕ್ಕೆ ಸ್ವಲ್ಪ ವಯಸ್ಸಾದೊಡನೆಯೇ ಊರ ಮಲ್ಲಿಕಾರ್ಜುನನ ದೇವಸ್ಥಾನಕ್ಕೆ ಹೋಗಲಾರಂಭಿಸಿತು. ಮಲ್ಲಿಕಾರ್ಜುನನ ದರ್ಶನ ಮಾಡುವುದರಲ್ಲಿ ಮಗುವಿಗೆ ಹೆಚ್ಚಿನ ಆಸಕ್ತಿ ಜೊತೆಯ ಮಕ್ಕಳೊಡನೆ ಮಲ್ಲಿಕಾರ್ಜುನನ್ನು ಪೂಜಿಸುವ ಆಟವಾಡುತ್ತಿತ್ತು. ಮನೆಗೆ ಬಂದಾಗ ಕಣ್ಣುಮುಚ್ಚಿ ಮಲ್ಲಿಕಾರ್ಜುನನ್ನು ಧ್ಯಾನಿಸುವುದು ಅದರ ಪದ್ಧತಿಯಾಯಿತು.

ತಂದೆತಾಯಿಯರ ಎಲ್ಲಾ ಒಳ್ಳೆಯ ಗುಣಗಳನ್ನು ಮೈಗೂಡಿಸಿಕೊಂಡ ಮಗು ಮಹಾದೇವಿ ಊರವರೆಲ್ಲರ ಪ್ರೀತಿ ಪಾತ್ರವಾಯಿತು. ಮಗುವಿನ ಶಿವಮಯ ದಿನಚರಿಯನ್ನು ಗಮನಿಸಿ ಬೆರಳಿಟ್ಟರು. ಮಗುವಿನ ಶಿವಭಕ್ತಿ ಶ್ರದ್ಧೆಗಳು ದೊಡ್ಡವರಿಗೂ ಆದರ್ಶವೆನಿಸಿದವು. ತನ್ನ ಓರಗೆಯವರಿಗೆಲ್ಲಾ ಅವಳು ಮಾದರಿಯಾಗಿ ಅವರೆಲ್ಲರ ಅಕ್ಕ ಆದಳು. ಮಗು ಮಹಾದೇವಿ ಅಕ್ಕಮಹಾದೇವಿಯಾಗಿ ಹರೆಯದ ಹೆಣ್ಣಾಗಿ ಬೆಳೆದಳು. ಬಂಗಾರದ ಹೂವಿಗೆ ಪರಿಮಳ ಕೂಡಿದಂತೆ, ಅಕ್ಕನ ಚೆಲುವಿಗೆ ಯೌವ್ವನ ಸೇರಿತು. ಗುಣ ರೂಪಗಳಲ್ಲಿ ಅವಳನ್ನು ಮೀರಿಸುವವರು ಆ ಊರಲ್ಲಿ ಮತ್ತೊಬ್ಬರಿರಲಿಲ್ಲ.

ಹೆಳವನಕಟ್ಟೆ ಗಿರಿಯಮ್ಮ ತನ್ನ ಬಾಲ್ಯ ಜೀವನದಲ್ಲಿ ಹೆತ್ತವರನ್ನು ಕಳೆದುಕೊಂಡು ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆಯುತ್ತಾಳೆ. ಹಾಗೆಯೇ ಚಂದ್ರಹಾಸನ ಕಥೆಯಲ್ಲಿ **'ಹೆತ್ತೋರ ಮನೆದೈವ ಮೈಲಾರಗೆ ಹಸ್ತವ ಮುಗಿದು ವಂದಿಸುವೆ'** ಎಂದಿರುವುದರಿಂದ ಮೈಲಾರಲಿಂಗ ಅವಳ ಹೆತ್ತವರ ಮನೆದೈವ ಎನ್ನುವುದು ತಿಳಿಯುತ್ತದೆ. ಮನೆಯಲ್ಲಿನ ಧಾರ್ಮಿಕ ಆವರಣ, ಜೊತೆಗೆ ಹೆತ್ತವರ ಆಗಲಿಕೆ ತಂದಿದ್ದ ಅನಾಥಭಾವ ಇವು ಒಟ್ಟಾಗಿಯೇ ಅವಳಲ್ಲಿ ಆ ವಯಸ್ಸಿಗೆ ದೈವಭಕ್ತಿಯನ್ನು ಬಲಿಸಿರಬೇಕು. ಅಂದಿನ

ಸಾಮಾಜಿಕ ರೂಢಿಯಂತೆ ಆಕೆಗೆ ೧೦-೧೨ ವರ್ಷಗಳಾಗುವಷ್ಟರಲ್ಲೆ ಹರಿಹರ ತಾಲೋಕಿನ ಶಾನುಭೋಗ ಕೃಷ್ಣಪ್ಪನವರ ಮಗ ತಿಪ್ಪರಸನೊಂದಿಗೆ ಮದುವೆಯಾಗುತ್ತದೆ.

ಗಿರಿಯಮ್ಮನ ಅಂಕಿತ 'ಹೆಳವನಕಟ್ಟೆ ರಂಗ'ನಲ್ಲಿ ಬರುವ 'ಹೆಳವನಕಟ್ಟೆ ಎನ್ನುವುದು ಮಲೆಬೆನ್ನೂರಿನ ಸಮೀಪದಲ್ಲಿರುವ ಕುಮಾರನಹಳ್ಳಿಯ ಒಂದು ಕೆರೆ. ಆ ಸ್ಥಳಕ್ಕೆ ಹೆಳವನಕಟ್ಟೆ ಎಂಬ ಹೆಸರು ಬರಲು ಕಾರಣವಾದ ಕಥೆಯೊಂದಿದೆ. ಹಿಂದೆ ಅಲ್ಲಿಯ ದಿಬ್ಬದಲ್ಲಿ ವಾಸವಾಗಿದ್ದ ಹೆಳವನೊಬ್ಬ ಆ ಕೆರೆಯನ್ನು ಕಟ್ಟಿಸಿದ್ದರಿಂದ ಅದಕ್ಕೆ ಆ ಹೆಸರು ಬಂದಿತಂತೆ. ಅದೇ ಕೆರೆಯ ಬದಿಗಿದ್ದ ಹುತ್ತದಲ್ಲಿ ರಂಗನಾಥನ ಮೂರ್ತಿ ದೊರಕಿ ಕೆರೆಯ ಬದಿಯಲ್ಲಿಯೇ ಅದಕ್ಕೆ ದೇವಸ್ಥಾನವನ್ನು ಆತನೇ ನಿರ್ಮಿಸಿದನಂತೆ. ಈ ರಂಗನಾಥನಿಗೆ 'ಹೆಳವನಕಟ್ಟೆ ರಂಗನಾಥ'ನೆಂದೇ ಹೆಸರಾಗಿ, ಅದೇಹೆಸರು ಗಿರಿಯಮ್ಮನ ಅಂಕಿತವಾಗಿಯೂ ಪ್ರಸಿದ್ದವಾಯಿತು. ಈಕೆ ರಂಗನಾಥನ ಭಕ್ತೆಯಾದರೂ ತನ್ನ ತವರಿನ ದೈವವಾದ ಮೈಲಾರಲಿಂಗನನ್ನು ಕಡೆಗಣಿಸುವುದಿಲ್ಲ. ಹರಿಹರರಿಬ್ಬರನ್ನೂ ಸಮಭಾವದಿಂದ ಕಂಡಂತಿರುವ 'ಈತ ರಂಗನಾದ ಹರಿಯು ಆತ ಲಿಂಗನಾದ ಹರನು' ಮತ್ತು 'ಈತ ಲಿಂಗದೇವ ಶಿವನು ಆತ ರಂಗಧಾಮ ವಿಷ್ಣು'ಎಂಬ ಹಾಡುಗಳು ಗಿರಿಯಮ್ಮನ ವಿಶಿಷ್ಟ ಮನೋಭಾವಕ್ಕೆ ಸಾಕ್ಷಿಯಾಗಿವೆ.

ಉದಯ ಮಧ್ಯಾಹ್ನ ಸಂಜೆಯಲಿ  
ವಿಧವರಿತು ಸೇವೆಯನು ಅನುಸರಿಸಿಕೊಂಬೆ  
ಹೃದಯ ಭಕ್ತರನು ಕಾಯ್ದು ಪಾಲಿಸುವೆ  
ಮುದದಿಂದ ಹೆಳವನಕಟ್ಟೆಯಲಿ ನೆಲೆಸಿರುವೆ[೭]

ಹೆಳವನಕಟ್ಟೆ ಗಿರಿಯಮ್ಮಳು ತನ್ನ ಭಕ್ತಿಯಲ್ಲಿ ಮಗ್ನತೆಯನ್ನು ಉತ್ಕಟತೆಯನ್ನು ತನ್ನ ಇಷ್ಟದೈವದ ಮುಂದೆ ವ್ಯಕ್ತಪಡಿಸುತ್ತಾಳೆ. ಹೆಳವನಕಟ್ಟೆ ರಂಗಯ್ಯನಲ್ಲಿ ಗಿರಿಯಮ್ಮಳು ತಾನು ತನ್ನ ದೈವವಾದ ರಂಗಯ್ಯನಲ್ಲಿ ನನಗೆ ನಾನಾ ರೀತಿಯ ಹಲವು ಜನ್ಮಗಳು ಬೇಡ, ಈ ಜನುಮದಲ್ಲೆ ನಿನ್ನ ಧ್ಯಾನ ಮಾಡುವ ಶಕ್ತಿಯ ಕೊಡು, ಎಂದು ಪ್ರಪಂಚವೆಂಬ ಬಂಧದಲ್ಲಿ ಸಿಲುಕಿದ್ದೇನೆ. ಇದರಿಂದ ನನಗೆ ಸದ್ಗತಿಯನ್ನು ಮುಕ್ತಿಯನ್ನು ಕಾಣಿಸು ಎಂದು ರಂಗಯ್ಯನಲ್ಲಿ ಮೊರೆಯಿಡುತ್ತಾಳೆ.

ಅಕ್ಕಮಹಾದೇವಿಯು ತನ್ನ ಚನ್ನಮಲ್ಲಿಕಾರ್ಜುನನ ಮೇಲೆ ಭಕ್ತಿಯು ಬರಲು ತನ್ನ ಸುತ್ತಮುತ್ತಲಿನ ಮನೆಯ ಪರಿಸರ ಮತ್ತು ತನ್ನ ಹೆತ್ತವರಿಂದ ಪ್ರೋತ್ಸಾಹವಿತ್ತು. ಆದರೆ ಹೆಳವನಕಟ್ಟೆ ಗಿರಿಯಮ್ಮಳು ತಾನು ಬಾಲ್ಯದಲ್ಲೆ ತನ್ನ ಹೆತ್ತವರನ್ನು ಕಳೆದುಕೊಂಡು ತನ್ನ ಒಂಟಿತನವೆ ಅವಳಿಗೆ ವಿಷ್ಣುವಿನ ಕಡೆಗೆ ಗಮನ ಹರಿಯುವಂತೆ ಮಾಡಿತು. ಅಕ್ಕಮಹಾದೇವಿಯ ತನ್ನ ಬಾಲ್ಯದಲ್ಲೇ ಭಕ್ತಿಯು ಮೊಳಕೆ ಓಡೆದಿತ್ತು. ಹೆಳವನಕಟ್ಟೆ ಗಿರಿಯಮ್ಮಳಿಗೆ ತಾನು ಬಾಲ್ಯದಿಂದ ಮುಂದುವರಿದಂತೆ ವಿಷ್ಣುವಿನ ಕಡೆ ಒಲಿದಳು.

**ಆ)ಸಂಕ್ರಮಣಾವಸ್ಥೆ:-**

ಮರೆದೊರೆಗಿ ಕನಸಕಂಡು ಹೇಳುವಲ್ಲಿ, ಸತ್ತ ಹೆಣ ಎದ್ದಿತ್ತು,  
ತನ್ನ ಋಣ ನಿಧಾನ ಎದ್ದು ಕರೆಯಿತ್ತು, ಹೆಪ್ಪಿಟ್ಟ ಹಾಲು ಗಟ್ಟಿತುಪ್ಪವಾಗಿ  
ಸಿಹಿಯಾಯಿತ್ತು ಇದಕ್ಕೆ ತಪ್ಪ ಸಾದಿಸಲೇಕೆ?  
ಚನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ?[೮]

ಮಹಾದೇವಿಯಕ್ಕನ ಅನುಭಾವದ ನಿಲುವನ್ನು ನಿಃಕಾಯದ ನಿಜವನ್ನು ಮೆಚ್ಚಿಕೊಂಡಾಡುವ ಶರಣಸ್ತೋಮದ ಮುಂದೆ ಕೈಮುಗಿದು ತಲೆಬಾಗಿ ತನ್ನ ನಿರಂಹಭಾವವನ್ನು ಮೆರೆಯುತ್ತಾಳೆ.

ಅಕ್ಕಮಹಾದೇವಿಯು ತಾನು ಹರೆಯಕ್ಕೆ ಬಂದಂತೆ ತನ್ನಲ್ಲಿಯ ಭಕ್ತಿಯ ಅಂತರಗಿಂಕ ವೇದನೆಗಳು ಹೆಚ್ಚಾಯಿತು. ಮಹಾದೇವಿಗೆ ವಯಸ್ಸಾಗುತ್ತಾ ಬಂದಂತೆಲ್ಲಾ ನಿರ್ಮಲ ಸುಮತಿಯರಿಗೆ ಎಲ್ಲಾ ತಂದೆ-ತಾಯಿಯರ ಹಾಗೆ ಮಗಳ ಮದುವೆಯ ಯೋಚನೆಯು ಕಾಡಿತು. ಬಹು ಲಾವಣ್ಯವತಿಯಾದ ತಮ್ಮ ಮಗಳಿಗೆ ತಕ್ಕವರನನ್ನು ಎಲ್ಲಿ ಹುಡುಕೋಣ ಎಂದು ಅವರು ಆಲೋಚಿಸಿದರು. ಅವರ ಆಲೋಚನೆಗೆ ಪೂರ್ಣ ವಿರಾಮ ಹಾಕುವ ಪ್ರಸಂಗವೊಂದು ನಡೆಯಿತು.

ಉಡುತಡಿ ಗ್ರಾಮ ದೊರೆ ಕೌಶಿಕ, ಅವನು ಯುವಕ, ಚಲುವ, ಒಂದು ದಿನ ಅವನು ತನ್ನ ಪರಿವಾರದೊಡನೆ ಭೇಟಿಗೆ ಹೋಗಿದ್ದ, ಬೇಟೆಯನ್ನು ಮುಗಿಸಿ ಸಂಜೆ ಹಿಂದಿರುಗುವಾಗ ಊರಿನ ಮುಖ್ಯ ಬೀದಿಯಲ್ಲಿ ಅವನು ಮೆರವಣಿಗೆಯಲ್ಲಿ ಬಂದ. ಮಂಗಳವಾದ್ಯಗಳು ಮುಳುಗುತ್ತಿದ್ದ ಸೇನಾ ತುಕಡಿಗಳಿಂದ ಕೂಡಿದ್ದ, ಕವಿ, ಗಮಕಿ, ಭಟ್ಟಂಗಿಗಳ ಪರಾಕು ಮಾರ್ನುಡಿಯುತ್ತಿದ್ದು ಆನೆಯ ಮೇಲೆ ಅಂಬಾರಿಯಲ್ಲಿ ಅರಸನು ಕುಳಿತಿದ್ದ. ಆ ಮೆರವಣಿಗೆ ಊರವರೆಲ್ಲರನ್ನು ಆಕರ್ಷಿಸಿತು. ಜನರೆಲ್ಲ ಬೀದಿಗೆ ನುಗ್ಗಿದರು, ಕೆಲವರು ಬಾಗಿಲಲ್ಲಿ ನಿಂತರು, ಕೆಲವರು ಮನೆಗಳ ಮಾಡು ಏರಿದರು.

ಹೊಳೆವ ಕೆಂಜೆಡೆಗಳ ಮಣಿಮುಕುಟದ
ಓಪ್ಪುವ ಸುಲಿಪಲ್ಲ ನಗೆಮೊಗದ
ಕಂಗಳ ಕಾತಿಯಿಂ ಈರೇಳುಭುವನಮಂ ಬೆಳಗುವ
ದಿವ್ಯಸ್ವರೂಪನಂ ಕಂಡೆ ನಾನು
ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು
ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಅಳುವ
ಗರುವನ ಕಂಡೆ ನಾನು.

ಅಕ್ಕಮಹಾದೇವಿಯು ತನ್ನ ಗೆಳತಿಯರೊಡನೆ ಮೆರವಣಿಗೆಯನ್ನು ನೋಡಲು ಮುಂಬಾಗಿಲಿಗೆ ಓಡಿ ಬಂದಳು, ಸಹಜ ಕುತೂಹಲದಿಂದ ರಾಜನನ್ನು ನೋಡುತ್ತಾ ನಿಂತಿದ್ದ ಚಲುವೆ ರಾಜನ ಕಣ್ಣಿಗೆ ಬಿದ್ದಳು. ಮೊದಲ ನೋಟಕ್ಕೆ ರಾಜನಿಗೆ ಅವಳಲ್ಲಿ ಪ್ರೇಮ ಅಂಕುರಿಸಿತ್ತು. ಅಕ್ಕಮಹಾದೇವಿಯೇನೂ ರಾಜನನ್ನು ನೋಡಿ ಮನೆಯೊಳಗೆ ಹೋದಳು. ಆದರೆ ರಾಜನು ಮಾತ್ರ ಅವಳಿಂದ ತನ್ನ ಕಣ್ಣನ್ನು ಕೀಳಲಾರದವನಾದ. ಅವಳ ಚೆಲುವೆಗೆ ಅವನು ಬೆರಗಾದ, ಮಾರುಹೋದ. ಅರಸನ ದೇಹ ಅರಮನೆಗೆ ಹೋಯಿತು. ಅವನ ಮನಸ್ಸು ಮಾತ್ರ ಅಕ್ಕನ ಮನೆಯಲ್ಲಿಯೇ ಉಳಿಯಿತು. ತಾನು ಮಹಾದೇವಿಯನ್ನು ಮದುವೆಯಾಗಬೇಕೆಂದು ಅವನು ಆ ಕ್ಷಣದಲ್ಲಿ ನಿರ್ಧರಿಸಿಕೊಂಡ.

ಅರಮನೆಗೆ ಬಂದ ಅರಸನ ಮನಸ್ಸನ್ನು ಮಹಾದೇವಿ ತುಂಬಿಕೊಂಡಿದ್ದಳು. ಅವನಿಗೆ ಊಟ ತಿಂಡಿಗಳೊಂದೂ ಸೇರಲಿಲ್ಲ. ಯಾರೊಡನೆಯು ಮಾತನಾಡುವುದು ಬೇಕಾಗಲಿಲ್ಲ. ತನ್ನ ಕೋಣೆಯನ್ನು ಸೇರಿ ಮಲಗಿಬಿಟ್ಟ, ಬೆಳಕು ಹರಿದು ದಿನ ಕಳೆದರೂ ರಾಜನ ತನ್ನ ದಿನದ ಕಾರ್ಯಗಳಲ್ಲಿ ಯಾವ ಆಸಕ್ತಿಯನ್ನು ತೋರಲಿಲ್ಲ. ಅವನನ್ನು ಯಾವುದೋ ಮಂಕು ಕವಿದಿತ್ತು. ದುಃಖ ಆವರಿಸಿತ್ತು. ಅರಮನೆಯಲ್ಲಿ ಗುಸುಗುಸು ಆರಂಭವಾಗಿತ್ತು. ಮಂತ್ರಿಗಳು ದಿಕ್ಕು ಕಾಣದಾದದರು.

ಮಹಾದೇವಿಯನ್ನು ಕಾಣದೆ ನಾನು ಉಳಿಯಲಾರೆ, ಎಂದು ಅರಸನು ದುಃಖಪಡುತ್ತಿದ್ದರಿಂದ ಮಂತ್ರಿಗಳು ಸಮಾಲೋಚನೆ ಮಾಡಿ ವಸಂತಕ ಎಂಬ ದೂತನನ್ನು ಸುಮತಿ ನಿರ್ಮಲರ ಬಳಿಗೆ ಕಳುಹಿಸಿದರು. ವಸಂತಕನು ಬಂದು ಅರಸನ ಅಪೇಕ್ಷೆಯನ್ನು ವಿವರಿಸಿದನು. ಮಹಾದೇವಿ ತುಂಬಾ ಅದೃಷ್ಟವಂತೆ, ಅವಳು ಮಹಾರಾಣಿಯಾಗುತ್ತಾಳೆ, ಎಂದು ಹೊಗಳಿದನು. ಇದರಿಂದ ನಿರ್ಮಲ ಸುಮತಿಯರು ಸಂತೋಷಕ್ಕೆ ಬದಲಾಗಿ ದುಃಖಪಡುವಂತಾಯಿತು. ಯಾವ ತಂದೆ ತಾಯಿಗಳಿಗೆ ಇಂಥ ಸಂಬಂಧ ಬೇಡವೆನಿಸುತ್ತದೆ. ಆದರೆ ಈ ಮದುವೆಗೆ ಎರಡು ಅಡ್ಡಿಗಳಿದ್ದವು. ಮಹಾದೇವಿ ಎಳೆತನದಿಂದಲೂ ಮಲ್ಲಿಕಾರ್ಜುನನೇ ನನ್ನ ಗಂಡ ಎಂದು ಹೇಳಿಕೊಂಡು ಬಂದ ಶಿವಭಕ್ತೆಯಾಗಿದ್ದಳು ಜೊತೆಗೆ ಕೌಶಿಕ ಮಹಾರಾಜ ಶಿವಭಕ್ತನಾಗಿರನಿಲ್ಲ. ಆದುದರಿಂದ ಈ ಮದುವೆ ಹೇಗೆ ಸಾಧ್ಯ ಎಂದು ಅವರು ದುಂಖಿಸಿದರು. ಅರಸನು ಅತಿಕೋಪಿಯೂ ನಿಷ್ಠುರನೂ ಆಗಿದ್ದನೆಂಬುದನ್ನು ತಿಳಿದು ಬೇರೆ ದಿಕ್ಕು ಕಾಣದೇ ಮಹಾದೇವಿಯ ಮನ ಒಲಿಸಲು ಅವರು ಯತ್ನಿಸಿದರು. ನೀವು ಏನೂ ಹೇಳಿದರೂ ನಾನು ಶಿವಭಕ್ತರಲ್ಲದವರನ್ನೂ ನಾನು ಒಲ್ಲೆ, ಬೆಳಕು ಕತ್ತಲನ್ನು ಹೇಗೆ ಕೂಡುತ್ತದೆ, ಎಂದು ಅವಳು ಹಟಮಾಡಿದಳು.

ಮಹಾದೇವಿಯ ತೇಜಸ್ಸು, ಗಾಂಭೀರ್ಯಗಳ ಎದುರು ವಸಂತಕನ ದೌತ್ಯ ಫಲಿಸಲಿಲ್ಲ. ಅವನು ಹಿಂದಿರುಗಿ ಬಂದು, ಮಂತ್ರಿಗಳಿಗೆ ಮಹಾದೇವಿಯ ಭಕ್ತಿ ನಿಷ್ಠೆಗಳನ್ನೆಲ್ಲಾ ವಿವರಿಸಿದ. ಮಂತ್ರಿಗಳು ರಾಜನಲ್ಲಿಗೆ ಬಂದು ವಿನಯದಿಂದ 'ಪ್ರಭೂ, ಮಹಾದೇವಿ ಶಿವಭಕ್ತೆ, ನಿಷ್ಠಾನಿರತೆ. ಅವಳು ವೈರಾಗ್ಯವಂತಳು. ಈ ಮದುವೆ ಸಾಧ್ಯವಾಗದು. ಅವಳನ್ನು ಮರೆಯುವುದೇ ಸೂಕ್ತವೆಂದು ವಿನಂತಿಸಿಕೊಂಡು, ಹೇಗಾದರೂ ಮಾಡಿ ಮಹಾದೇವಿಯನ್ನು ತರಲೇಬೇಕು ಎಂದು ಆಜ್ಞೆ ಮಾಡಿದನು. ಮಂತ್ರಿಗಳಿಗೆ ಬೇರೆ ದಾರಿಯೇ ಉಳಿಯಲಿಲ್ಲ. ಅವರೆಲ್ಲರೂ ಮಹಾದೇವಿಯ ಮನೆಗೆ ಬಂದರು.

ಈ ಬಲಾತ್ಕಾರದ ಮಾರ್ಗವನ್ನು ಮಹಾದೇವಿ ಸಹಿಸಲಿಲ್ಲ. ಮಲ್ಲಿಕಾರ್ಜುನ ನನ್ನ ಗಂಡ, ಅವನಿಗೆ ಹುಟ್ಟುಸಾವುಗಳಿಲ್ಲ. ಜಾತಿ ಕುಲಗಳ ಕಟ್ಟಿಲ್ಲ. ಅವನಿಗೆ ಭಯವೂ ಇಲ್ಲ. ಅಂಥ ಚಲುವಾದ ಗಂಡನನ್ನು ನಾನು ಒಲಿದಿದ್ದೇನೆ. ಈ ಹುಟ್ಟಿ ಸತ್ತು ಕೆಟ್ಟುಹೋಗುವ ಗಂಡದಿರು ನನಗೆ ಬೇಡ ಅವರನ್ನು ಒಲೆಹಾಕಿ ಎಂದು ಅವಳು ಕೋಪದಿಂದ ನುಡಿದಳು. ಇದನ್ನು ಕೇಳಿ ತಂದೆ ತಾಯಿಗಳೂ ಮಂತ್ರಿಗಳು ಮೂಕರಾದರು. ಏನಾದರೇನು? ಅರಸನ ಆಜ್ಞೆ ನಡೆಯಲೇಬೇಕು. ಮಂತ್ರಿಗಳು ನಿರ್ಮಲ ಸುಮತಿಯರನ್ನು ಕರೆದು ಹೇಳಿದರು, ದೊರೆಗೆ ನಿಮ್ಮ ಮಗಳನ್ನು ಕೊಡದಿದ್ದರೆ ನಿಮ್ಮನ್ನು ಕೊಲ್ಲಬೇಕೆಂದು ರಾಜಾಜ್ಞೆಯಾಗಿದೆ.

ಇದನ್ನು ಕೇಳಿದ ಅವರು 'ಮಗಳೆ ನಿನ್ನಿಂದ ನಮಗೆ ಮುಪ್ಪಿನಲ್ಲಿ ದುರ್ಮರಣ ಲಭಿಸುವಂತಾಯಿತು. ನಿನ್ನ ಭಕ್ತಿ ನಮಗೆ ಸಂಕಟವನ್ನು ತಂದಿದೆ. ಶಿವಭಕ್ತರಲ್ಲದವರೊಡನೆ ಜೀವನ ನಡೆಸುವುದು ಕಠಿಣವೇ, ಕರಿಕಾಲೆಮ್ಮ, ಹೇರೂರ ಹಂಗೂಸು, ವೈಜಕ್ಕವೆ ಮಾಂಗಯಕ್ಕ ಇವರೆಲ್ಲ ಶಿವಭಕ್ತರಲ್ಲದ ಭವಿಗಳನ್ನು ಮದುವೆಯಾದ ಪ್ರಸಂಗಗಳಿಲ್ಲವೇ, ಎಂದರು.

ತಂದೆ ತಾಯಿಗಳ ದುಃಖವನ್ನು ಮಹಾದೇವಿ ಸಹಿಸದಾದಳು. ತಾನು ನಂಬಿದ ಮಲ್ಲಿಕಾರ್ಜುನ ದೇವರು ತನ್ನನ್ನೆ ಕೈಬಿಡಲಾರನೆಂದು ನಂಬಿ ಅವಳು 'ಅರಸನನ್ನು ಮದುವೆಯಗುತ್ತೇನೆ. ಆದರೆ ಮದುವೆಯಾದ ಮೇಲೂ ಶಿವಪೂಜೆ ಮಾಡುತ್ತೇನೆ. ಗುರುಲಿಂಗ ಜಂಗಮರ ಪೂಜೆಯನ್ನು

ಮಾಡುತ್ತೇನೆ. ಪುರಾಣಶ್ರವಣ ತತ್ವೋಪದೇಶಗಳಲ್ಲಿ ತೊಡಗುತ್ತೇನೆ. ಕೌಶಿಕ ರಾಜ ಇದಕ್ಕೆ ಅಡ್ಡಿಯಾಗಬಾರದು. ಎಂಬ ಷರತ್ತಿನ ಮೇಲೆ ವಿವಾಹ ಆಗಲು ನಿಶ್ಚಿಯಿಸಿದಳು.

ಕೋಪವನು ಬಿಡು ಎನ್ನ ಕುಂದನೆಣಿಸದಿರಯ್ಯ ಆಪತ್ಬಂದು ಶ್ರೀರಂಗ

ದ್ರೌಪದಿವರದ ಹೆಳವನಕಟ್ಟೆ ರಂಗಯ್ಯ ಲಕ್ಷ್ಮಿಪತಿ ಸಲಹಯ್ಯ ರಂಗ

ಯಾರಿಗೂ ಲೋಪವಾಗದಂತೆ, ತನ್ನ ಕೋಪವನ್ನು ಬಿಟ್ಟು ತನ್ನ ಭಕ್ತರನ್ನೂ ಸಲಹು, ಎಂದು ಹೆಳವನಕಟ್ಟೆ ಗಿರಿಯಮ್ಮ ತನ್ನ ಅಭೀಪ್ಸೆಯನ್ನು ವ್ಯಕ್ತಪಡಿಸುತ್ತಾಳೆ.

ಭಗವಂತನಲ್ಲಿ ಅಪಾರ ಭಕ್ತಿ ಹೋಂದಿದ್ದ ಗಿರಿಯಮ್ಮಳು ತಾನು ಹರೆಯಕ್ಕೆ ಬರುವ ಮುಂಚೆಯೇ ೧೨ ವರ್ಷಗಳಾಗುವಷ್ಟರಲ್ಲಿಯೇ ಅವಳಿಗೆ ಮದುವೆ ನಿಶ್ಚಯಿಸಿದರು. ತಿಪ್ಪರಸನೊಂದಿಗೆ ಇವಳ ವಿವಾಹ ಏರ್ಪಡುತ್ತದೆ . ಬುದ್ದಿ ಮತ್ತು ಪ್ರಾಪಂಚಿಕ ಅರಿವೆಗೆ ಬರುವ ಮುಂಚೆಯೆ ಗಿರಿಯಮ್ಮಳ ವೈವಾಹಿಕ ಜೀವನಕ್ಕೆ ಪಾದಾರ್ಪಣೆ ಮಾಡುತ್ತಾಳೆ. ಗಂಡನ ಮನೆಯಲ್ಲಿದ್ದುಕೊಂಡೆ ತನ್ನ ಭಕ್ತಿ ಕೈಂಕರ್ಯವನ್ನು ಮುಂದುವರೆಸಿದಳು.

ಗಿರಿಯಮ್ಮಳು ಕೆಲವೊಂದು ತನ್ನ ಹೆಣ್ಣುಜನ್ಮವನ್ನು ಹಳಿದುಕೊಳ್ಳುತ್ತಾಳೆ. ಸಾಕು ಇನ್ನೂ ಹೆಣ್ಣು ಜನ್ಮದ ಬಾಳು ಎಂದು ಆಕೆ ಹೇಳುತ್ತಾಳೆ. ಹೆಂಡತಿ ಎಂದರೆ ಗಂಡನಿಂದ ಆಳಿಸಿಕೊಳ್ಳುವವಳು ಎಂಬ ಸಾಂಪ್ರದಾಯಿಕ ದೃಷ್ಟಿಕೋನವನ್ನು ಇಲ್ಲಿ ಬೆಂಬಲಿಸಿದಂತಿದೆ.

**ಹೆಚ್ಚಾಗಿ ಅರಿಯದ ಹೆಣ್ಣು ಬಾಲೆಯು ನಾ'** ಎಂದು ಹೇಳಿಕೊಳ್ಳುವ ಈಕೆಯ ಹಾಡುಗಳಲ್ಲಿ ಪ್ರಾಸಾನುಪ್ರಾಸಗಳು,ಉಪಮೆ,ರೂಪಕಾದಿ ಅಲಂಕಾರಗಳು ಪ್ರಯತ್ನವಿಲ್ಲದೆಯೇ ಹರಿದುಬಂದಿದೆ.

ನೀಲಕಂಠನ ನಿಗಮಸಾರನ ಬಲಶಶಿಧರ ಭರ್ಗನ

ಶೀಲ ಸದ್ಗುಣ ಫಾಲನೇತ್ರನ ಕಾಲಾಂತಕ ಎನ್ನ ಕಾಯ್ವನ

ಅಜಗರಶಯನನೆ ಬುಧಜನನಮಿತನೆ

ತ್ರಿ ಜಗವಂದಿತಪಾದ ಪದುಮಜಜನಕನೆ್

ಮಳೆಗಾಗಿ ಪ್ರಾರ್ಥಿಸಿದ ಹಾಡಿನಲ್ಲಿ ಬರುವ ಒಂದು ಚಿತ್ರದಲ್ಲಿ ದೇವರನ್ನು ಸ್ತುತಿಸಿದ ಸನ್ನಿವೇಶ ಮತ್ತು ಸ್ವಭಾವೋಕ್ತಿಗೆ ಉತ್ತಮ ನಿದರ್ಶನವಾಗಿದೆ.

ಅಕ್ಕಮಹಾದೇವಿಯು ಇಹದ ವಿವಾಹವನ್ನು ಬಿಟ್ಟು ಅಲೌಕಿಕವಾಗಿ ಚೆನ್ನಮಲ್ಲಿಕಾರ್ಜುನನ ಜೊತೆ ವಿವಾಹವಾಗುವ ಕನಸನ್ನು ಕಾಣುತ್ತಾಳೆ. ತನ್ನ ತಂದೆ ತಾಯಿಯರ ಪ್ರೀತಿಗೊಸ್ಕರ ಮದುವೆಗೆ ಒಪ್ಪಿಕೊಂಡಿರುತ್ತಾಳೆ. ಆದರೆ ಕೊನೆಗೂ ಚೆನ್ನಮಲ್ಲಿಕಾರ್ಜುನನ್ನು ಕಾಣುವಲ್ಲಿ ಯಶಸ್ವಿಯಾಗುತ್ತಾಳೆ. ಗಿರಿಯಮ್ಮಳು ತನ್ನ ಗಂಡನಿಗೆ ಇನ್ನೊಂದು ಮದುವೆ ಮಾಡಿ, ತನ್ನ ಗಂಡನ ಮನೆಯಲ್ಲಿಯೇ ಭಕ್ತಿಯ ಮಾರ್ಗವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಾಳೆ.

**ಇ)ದಾಂಪತ್ಯಾವಸ್ಥೆ:-**

ಸಂಸಾರಸಾಗರದೊಳಗೆ ಬಿದ್ದ ನೋಡಾ ನಾನು
ಸಂಸಾರ ನಿಸ್ಸಾರವೆಂದು ತೋರಿದನೆನಗೆ ಗುರು
ಅಂಗವಿಕಾರದ ಸಂಗವ ನಿರಿಸಿ
ಲಿಂಗ ವಂಗದ ಮೇಲೆ ಸ್ಥಾಪ್ಯವ ಮಡಿದನೆನ್ನ ಗುರು
ಹಿಂದಣ ಜನ್ಮವ ತೊಡೆದು
ಮುಂದಣ ಪಥವ ತೋರಿದನೆನ್ನ ತಂದೆ
ಚೆನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು[10]

ಸಂಸಾರದ ಬಂಧನದ ಮಹತ್ವವನ್ನು ತನ್ನ ಭಕ್ತಿ ಸಾಧನೆಗೆ ಮಾರ್ಗವನ್ನು ಸ್ಥಾಪಿಸಿದ ತನ್ನ ಗುರು ಚೆನ್ನಮಲ್ಲಿಕಾರ್ಜುನನನ್ನು ಸ್ತುತಿಸಿದ್ದಾಳೆ.

ಕೌಶಿಕನ ಜೊತೆ ವಿವಾಹವಾದ ಅಕ್ಕಮಹಾದೇವಿಯು ಅರಮನೆಯನ್ನು ಸೇರುತ್ತಾಳೆ. ಅಕ್ಕಮಹಾದೇವಿ ವಿವಾಹವಾದ ನಂತರ ಮೊದಲಿಗಿಂತ ನೂರುಮಡಿ ಹೆಚ್ಚಾಗಿ ಶಿವ ಪೂಜೆಯಲ್ಲಿ ಮಗ್ನನಾದಳು. ಹೊತ್ತಿಗೆ ಮುಂಚೆ ಎದ್ದು ಸ್ನಾನ ಮಾಡಿ, ಮುಡಿಯುಟ್ಟು, ಹೂ ಮುಡಿದು, ಬಂಗಾರದ ಪಾದುಕೆಗಳನ್ನು ಮೆಟ್ಟಿ ಸಖಿಯರೊಡನೆ ಪೂಜಾಮಂದಿರ ಸೇರಿ ನಡೆಸುವ ಪೂಜೆಯ ವೈಭವವನ್ನು ಹರಿಹರ ಕವಿ ವಿವರವಾಗಿ ವರ್ಣಿಸಿದ್ದಾನೆ. ಪರಿಮಳದಿಂದ ಕೂಡಿದ ತಿಳಿಜಲದಲ್ಲಿ, ಶಿವಲಿಂಗಕ್ಕೆ ಸ್ನಾನ ಮಾಡಿಸಿ, ಬಗೆಬಗೆಯ ರೀತಿಯಿಂದ ಅಲಂಕಾರ ಮಾಡಿ, ಪೂಜಿಸುತ್ತಾ ಪೂಜಿಸುತ್ತಾ ರೋಮಾಂಚನಗೊಂಡು ಮೈಮರೆಯುವ ಭಕ್ತೆ ಮಹಾದೇವಿಯ ಚಿತ್ರ ಅಪೂರ್ವವಾದುದು. **ಗುರುವೆ ಬಾರ, ಪರವೆ ಬಾರ, ವರವೆ ಬಾರ** ಎಂಬ ಅವಳ ಕರೆ ಅರಮನೆಯನ್ನು ಮಾತ್ರವಲ್ಲ, ಅರಮನೆಯಲ್ಲಿರುವವರ ಹೃದಯಗಳಲ್ಲಿಯೂ ತುಂಬುವಂತಾಯಿತು. ಅವಳು ಯಾವಾಗಲೂ ಶಿವಪೂಜೆಯಲ್ಲಿ ಗುರುಜಂಗಮರ ಸೇವೆಯಲ್ಲಿ ನಿರತಳಾಗಿತ್ತಿದ್ದಳು. ರಾಜನ ಬೊಕ್ಕಸದ ಹಣ ಸಾಕಷ್ಟು ಅವಳ ಅತಿಥಿ ದಾಸೋಹಗಳಿಗಾಗಿ ಖರ್ಚಾಗುತ್ತಿತ್ತು. ಅರಮನೆ ನಿಧಾನವಾಗಿ ಧಾರ್ಮಿಕ ಕೇಂದ್ರವಾಗಿ ಮಾರ್ಪಟ್ಟಿತು.

ಕೌಶಿಕರಾಜ ಇದನ್ನೆಲ್ಲ ಸಹಿಸಲಾರದವನಾದ. ಚೆಲುವೆಯೊಡನೆ ಸರಸವಾಡಲು ಬಯಸಿದ್ದ ತರುಣ ರಾಜನಿಗೆ ಶಿವಪೂಜೆಯ ವೈಭವ ಬೇಸರ ತರುವಂತೆ ಆಯಿತು. ಮಹಾದೇವಿಯನ್ನು ನೋಡಿದಾಗಲೆಲ್ಲಾ ಅವನು ಅವಳು ನನಗೆ ಎಷ್ಟು ಹತ್ತಿರ, ಆದರೂ ಎಷ್ಟುದೂರ' ಎಂದು ಕೊರಗುತ್ತಿದ್ದ. ಒಂದು ಸಲ ಅವನು ತನ್ನ ಮನದ ಅಳಲನ್ನು ಮಹಾದೇವಿಯೊಂದಿಗೆ ತೊಡಿಕೊಂಡ. ಅವಳು ಹೇಳಿದಳು, ಗಂಡಿನ ಮುಂದೆ ಹೆಣ್ಣು ಮಾಯೆಯಾಗಿ ಕಾಡುತ್ತದೆ. ಹೆಣ್ಣಿನ ಮುಂದೆ ಗಂಡು ಮಾಯೆಯಾಗಿ ಕಾಡುತ್ತದೆ. ಹೆಣ್ಣು ಗಂಡುಗಳ ಮೋಹದ ಮಾಯೆಗೆ ಸಿಕ್ಕಿ ನಾವು ಮೋಸ ಹೋಗಬಾರದು.

ಕೌಶಿಕನಿಗೆ ಈ ಉಪದೇಶ ಬೇಕಾಗಿರಲಿಲ್ಲ. ಅವನು ನಿರಾಶೆಗೊಳ್ಳಲಿಲ್ಲ. ಮಹಾದೇವಿಯ ಮನಸ್ಸನ್ನು ಗೆದ್ದು ತನ್ನಲ್ಲಿ ಅನುರಕ್ತಳಾಗುವಂತೆ ಮಾಡಲು ಅವನು ನಾನಾ ಪರಿಯಲ್ಲಿ ಯತ್ನಿಸಿದ. ಅರಮನೆಯ ಸಖಿಯರನ್ನು ಈ ಕೆಲಸಕ್ಕಾಗಿ ನಿಯೋಜಿಸಿದ. ಅವರೆಲ್ಲಾ ಮೂರು ಹೊತ್ತು

ಮಹಾದೇವಿಯನ್ನು ಮುತ್ತಿಕೊಂಡು ರಾಜನ ಗುಣಗಾನ ಮಾಡತೊಡಗಿದರು. ಇದು ಮಹಾದೇವಿಗೆ ಬೇಸರವನ್ನುಂಟು ಮಾಡುತ್ತಿತ್ತು.

ಬೆಟ್ಟದ ಮೇಲೊಂದು ಮನೆ ಮಾಡಿ ಮೃಗಗಳಿಗೆ ಅಂಜಿದರೆ ಹೇಗೆ?

ಸಮುದ್ರದ ತಡಿಯೊಳಗೆ ಮನೆಯ ಮಾಡಿ ನೊರೆತೊರೆಗಳಿಗೆ ಅಂಜಿದರೆ ಹೇಗೆ?

ಸಂತೆಯೊಳಗೆ ಮನೆಯ ಮಾಡಿ ಶಬ್ದಕ್ಕೆ ನಾಚಿದರೆ ಹೇಗೆ?

ಲೋಕದಲ್ಲಿ ಹುಟ್ಟಿ ಸ್ತುತಿ ನಿಂದೆ ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು. ಎಂದು ಹೇಳಿಕೊಂಡು ಅವಳ ದಿನಚರಿಯಲ್ಲಿ ಮಗ್ನರಾಗಿರುತ್ತಿದ್ದಳು.

ಅವಳ ಮನಸ್ಸು ಸಖಿಯರಿಗೆ ಅರ್ಥವಾಗುತ್ತಿರಲಿಲ್ಲ. ರಾಜನ ಪರವಾದ ಅವರ ರಾಯಭಾರ ಒಂದೇ ಸಮನೆ ನಡೆಯಿತು. ಒಂದು ಸಲ ಅಕ್ಕ ತನ್ನ ನಿಲುವನ್ನು ಹೀಗೆ ವಿವರಿಸಿದಳು. **ಗಿರಿಯಲ್ಲದೇ ಹುಲು ಮೊರಡಿಯಲ್ಲಿ ನವಿಲು ಆಡುತ್ತದೆಯೆ? ಕೊಳವನಲ್ಲದೇ ಕಿರು ಹಳ್ಳವನ್ನು ಹಂಸ ಅಪೇಕ್ಷಿಸುತ್ತದೆಯೇ? ಮಾವಿನಮರ ಚಿಗುರಿದಲ್ಲದೇ ಕೋಗಿಲೆಹಾಡುತ್ತದೆಯೇ? ಪರಿಮಳವಿಲ್ಲದೇ ಹೂವಿಗೆ ದುಂಬಿ ಆಶಿಸುತ್ತದೆಯೇ? ಗೆಳತಿಯರಿರಾ।** ಹೀಗೆಯೆ ನನ್ನ ಮನಸ್ಸು ನನ್ನ ದೇವರಾದ ಚೆನ್ನಮಲ್ಲಿಕಾರ್ಜುನಲ್ಲದೆ ಬೇರೆಯವರನ್ನು ಬಯಸುವುದಿಲ್ಲ.

ರಕ್ತ ಮಾಂಸಗಳ ಮನುಷ್ಯಳನ್ನು ಮಹಾದೇವ ಏರಿಸುತ್ತಾನೆಯೇ ಎಂದು ನಕ್ಕರು. ಇಂಥ ಹೀಯಾಳಿಕೆಯಿಂದ ಅಕ್ಕ ವಿಚಲಿತವಾಗಲಿಲ್ಲ. ಬಂಜೆಗೆ ಹೆರಿಗೆಯ ನೋವು ತಿಳಿಯುವುದಿಲ್ಲ. ಮಲತಾಯಿಗೆ ಪ್ರೀತಿ ತಿಳಿಯುವುದಿಲ್ಲ. ನೋಯುವವರ ನೋವು ನೋಯದವರಿಗೆ ಹೇಗೆ ತಿಳಿದೀತು? ಮಲ್ಲಿಕಾರ್ಜುನನ ಆಗಲಿಕೆಯಿಂದ ನನಗೆ ಎದೆಗೆ ಕತ್ತಿಯನ್ನು ಚುಚ್ಚಿ ತಿರುಪಿದರೆ ಉಂಟಾಗುವ ನೊವು ಆಗಿದೆ. ತಾಯಿಯರೇ ಆ ನೋವನ್ನು ನೀವು ಹೇಗೆ ಬಲ್ಲಿರಾ? ಎಂದು ಅವರ ಬಾಯಿ ಮುಚ್ಚಿಸಿದಳು. ಆದರೇನು ಅವಳ ಕಷ್ಟಗಳು ಪರಿಹಾರವಾಗಲಿಲ್ಲ. ಸಂಸಾರ ಬೆನ್ನು ಬಿಡದೆ ಕಾಡುತ್ತಿದೆ. ಅಂದಿನಿಂದ ಕಷ್ಟಕ್ಕೆ ಏನು ಮಾಡಲಿ ಕಷ್ಟದಿಂದ ಬೇಯುತ್ತಿರುವ ಓಡಲನ್ನು ನನು ಕಾಪಾಡಿಕೊಳ್ಳಲಾರೆ. ಕೊಲ್ಲುವುದು ಕಾಪಾಡುವುದು, ನಿನಗೆ ಸೇರಿದ್ದು ಎಂದು ಮಲ್ಲಿಕಾರ್ಜುನನ್ನು ಮೊರೆಯಿಟ್ಟಳು.

ಒಂದು ಸಲ ಅಕ್ಕನನ್ನು ನೋಡಲು ಶಿವಭಕ್ತರು ಬಂದಾಗ ಅವರಿಗೆ ನೋಡಲು ಅವಕಾಶವನ್ನು ಕೌಶಿಕ ನೀಡುವುದಿಲ್ಲ. ಇದು ಅಕ್ಕನಿಗೆ ತಿಳಿದು ಸುಡುಸುಡು ಪಾತಕಿಯೆ, ನಾನು ಕೆಟ್ಟೆ ನಿನ್ನ ದೆಸೆಯಿಂದ ಶಿವಭಕ್ತರ ನಿಂದೆಯನ್ನು ಕೇಳುವಂತಾಯಿತು. ಇದರಿಂದ ಕುಸಿದುಹೋದ ಕೌಶಿಕ ರಾಜ ಕಾಲಿಗೆ ಬಿದ್ದು ಒಂದು ಅಪರಾಧವಾಯಿತು. ಕ್ಷಮಿಸಬೇಕು ಎಂದನು.

ಒಂದು ಸಲ ಲಿಂಗಪೂಜೆಯಲ್ಲಿ ಮೈಮರೆತ ಮಹಾದೇವಿಯನ್ನು ಕೌಶಿಕ ಕಂಡ ಮನಸ್ಸಿನ ಭಾವನೆಗಳನ್ನು ಹತ್ತಿಕ್ಕಲಾರದೆ ಅವನು ಮಹಾದೇವಿಯ ಹಿಡಿದುಕೊಂಡ. ಅವಳ ಧ್ಯಾನ ಭಂಗವಾಯಿತು. ಕಣ್ಣು ತೆರೆದು ಎಲೈ ಭವಿಯೆ, ಶಿವಪೂಜೆಯ ಸಮಯದಲ್ಲಿ ನೀನು ನನ್ನನ್ನು ಮುಟ್ಟಬಹುದೇ? ಎಂಥ ಅವಿವೇಕ ಮಾಡಿದೆ. ನಿನ್ನ ಎರಡನೇ ತಪ್ಪು ಮುಗಿದುಹೋಯಿತು.

ಶರಣರ ಜೋತೆಯಲ್ಲಿ ಮಹಾದೇವಿ ರಾಜನ ಕಡೆ ಗಮನ ಕೊಡಲಿಲ್ಲ. ನಾಡಿಗೆ ದೊರೆಯಾದ ತನಗೆ ಅಪಮಾನವೆಂದು ರಾಜ ಭಾವಿಸಿದ. ಸಾಕು ನಿಲ್ಲಿಸು ನಿನ್ನ ಪೂಜೆಯನ್ನು ಎಂದು ಗರ್ಜಿಸಿದ. ನಿನ್ನ ಗಂಡನನ್ನು ಕಣ್ಣೆತ್ತಿ ನೋಡದ ನಿನಗೆ ಈ ಆರಮನೆ ಈ ವೈಭವಗಳೇಕೆ ಬೇಕು? ಎಂದು ಪ್ರಶ್ನಿಸಿದ

ಜಂಗಮರ ಮೇಲೂ ಕೋಪಗೊಂಡ, ಇದಕ್ಕೆ ಅಕ್ಕ ಶರಣರ ಚಾರಿತ್ಯ ನಿನಗೇನು ಗೊತ್ತು? ಅವರ ಸಂಗ ಸುಖವನ್ನು ನೀನು ಹೇಗೆ ತಿಳಿಯುತ್ತಿ, ನಿನ್ನ ಮೂರು ತಪ್ಪುಗಳು ಇಲ್ಲಿಗೆ ಮುಗಿದು ಹೋದವು. ನೀನು ಕೊಟ್ಟ ವಡವೆ, ವಸ್ತ್ರಗಳನ್ನು ನೀನೆ ಇಟ್ಟುಕೊ, ನಿನ್ನದೆಂಬುದು ನನಗೆ ಇನ್ನೆನೂ ಬೇಡ ನಿನ್ನ ದಾರಿ ನಿನಗೆ ನನ್ನ ದಾರಿ ನನಗೆ, ನಾನಿನ್ನು ಸ್ವತಂತ್ರಳು. ಎಂದು ಹಾಗೆಯೇ ಅರಮನೆಯಿಂದ ಹೊರಬಂದಳು.

ಹೆಳವನಕಟ್ಟೆ ಗಿರಿಯಮ್ಮಳು ತನ್ನ ದಾಂಪತ್ಯದಿಂದ ಹೊರಬರದೆ ತನ್ನ ಮನೆಯವರ ಅನುಮತಿ ಪಡೆದು ಭಕ್ತಿಯ ಮಾರ್ಗವನ್ನು ಕಾಣುತ್ತಾಳೆ. ಆದರೆ ಅಕ್ಕಮಹಾದೇವಿಗೆ ತನ್ನ ಭಕ್ತಿಯನ್ನು ಹೊಂದಲು ಸಂಸಾರದ ಹೊರಗೆ ಬರುವುದು ಅನಿವಾರ್ಯವಾಯಿತು. ಗಿರಿಯಮ್ಮಳು ತಾನು ಹರೆಯಕ್ಕೆ ಬರುತ್ತಿದ್ದಂತೆಯೇ ಅವಳನ್ನು ದೈವಾಂಶಸಂಭೂತಳೆಂದು ಭಾವಿಸಿ ಆಕೆಗೆ ತಲೆಬಾಗಿದ ಪ್ರಸಂಗ, ಅವಳ ಅನನ್ಯ ದೈವಭಕ್ತಿ, ವೈರಾಗ್ಯಗಳನ್ನೆ ಹೇಳುವಂಥದು. ಗಿರಿಯಮ್ಮ ಮನೆಯಲ್ಲಿ ಸೌದೆ ಇಲ್ಲದಿದ್ದಾಗ ಅವಳ ಅತ್ತೆ ಬೈದಂತೆಯೇ ಒಲೆಗೆ ಕಾಲನ್ನಿಟ್ಟು ಅಡಿಗೆ ಮಾಡಿದಳೆನ್ನುವ ಪ್ರಸಂಗ, ಮಳೆ ಬೆಳೆ ಇಲ್ಲದೆ ಬರಗಾಲ ಬಂದ ಕಾಲದಲ್ಲಿ ದೇವರಲ್ಲಿ ಪ್ರಾರ್ಥಿಸಿ ಮಳೆ ತರಿಸಿದಳೆನ್ನುವ ಪ್ರಸಂಗ, ಜನರು ಬಂಜೆಯೆಂದು ದೂರಿದ ಗಿರಿಯಮ್ಮನ ಕೈಯಲ್ಲಿ ಸುಮತೀಂದ್ರರು ದೇವಕಿ ಯಶೋಧೆಯರ ಕೈಲಕ್ಷಣಗಳನ್ನು ಗುರುತಿಸಿ ಮಹಾತ್ಮಳೆಂದು ಜಾಹೀರು ಮಾಡಿದ ಪ್ರಸಂಗ, ಗೋಪಾಲದಾಸರು ಅವಳನ್ನು ಅನುಗ್ರಹಿಸಿ ಹೋದ ಪ್ರಸಂಗ, ಮಲೆಬೆನ್ನೂರಿನ ಸಮೀಪದ ದಿಬ್ಬದಹಳ್ಳಿ ಒಂದು ಮನೆಯವರು ಹೆಳವನಕಟ್ಟೆ ರಂಗನಾಥನ ಜಾತ್ರೆಗೆ ಬಂದ ಸಂದರ್ಭದಲ್ಲಿ ಅವರ ಒಂದು ವರ್ಷದ ಮಗು ಸತ್ತಾಗ ಗಿರಿಯಮ್ಮ ಆ ಮಗುವನ್ನು ಬದುಕಿಸಿದ್ದರಿಂದ ಆ ಮನೆತನದವರಿಗೆ ಪವಾಡವೆಂದು ಹೆಸರು ಬಂದಿದೆ. ಎಂದು ಹೇಳುವ ಪ್ರಸಂಗ ಇಂಥ ಅನೇಕ ಪವಾಡಮಯ ಘಟನೆಗಳು ಆಕೆಯ ಬದುಕಿನ ಸುತ್ತ ಹೆಣೆದುಕೊಂಡು ಆಕೆ ಅಸಾಮಾನ್ಯ ಮಹಿಳೆಯಾಗಿ ಜನಮನದಲ್ಲಿ ನೆಲೆಸಿದಳು.

ಗಂಡನ ಮನೆಯಲ್ಲದ್ದೇ ವಿರಾಗಿಣಿಯಗಿ, ಭಕ್ತೆಯಾಗಿ ಬಾಳಿನ ಗಿರಿಯಮ್ಮ ತನ್ನ ಸುತ್ತಿನ ಸಮಾಜಕ್ಕೆ ಉಪಕಾರಿಯಾಗಿ ಮಾರ್ಗದರ್ಶಕಳಾಗಿ ಬೆಳೆದು **ಅಮ್ಮನವರು** ಎನಿಸಿಕೊಳ್ಳತ್ತಾಳೆ.

ಮನೆಗೆಲಸಗಳಲ್ಲಿ ತೊಡಗಿ ಮನೆಯ ಸಾಮಾನ್ಯ ಸದಸ್ಯಳಂತೆ ಬಾಳಿದರೂ ಉಳಿದವರಿಗೂ ಹಿತಕಾರಿಯಾಗಿ ನಡೆಯುತ್ತಾಳೆ. ಈಕೆಯ ಸನ್ನಡತೆ, ವೈರಾಗ್ಯ ದೈವಭಕ್ತಿಗಳು ಗಂಡನಿಗೆ ಬೇರೆ ಮದುವೆ ಮಾಡಿಸಿದ ವಿಚಾರ ಇವೆಲ್ಲವೂ ಆಕೆ ಬಗ್ಗೆ ವರ್ಣರಂಜಿತ ಕಥೆಗಳು ಹರಡಲು ಕಾರಣವಾಗಿ ಆಕೆ ಆ ಸುತ್ತಿನ ಜನಮನದಲ್ಲಿ ವಹಿಮಾನ್ವಿತ ಭಕ್ತೆಯಾಗಿ ನೆಲೆಯೂರುತ್ತಾಳೆ. ಗಿರಿಯಮ್ಮ ಹಾಲು ಕರೆಯುವಾಗ ಮೊಸರು ಕಡೆಯುವಾಗ ಬಾಲಕೃಷ್ಣ ಅಕೆಗೆ ಗೋಚರವಾಗುತ್ತಿದ್ದನೆಂಬುದು ಇಂಥದೇ ಒಂದು ನಂಬಿಕೆ. ಗಿರಿಯಮ್ಮ ರಾಧಿಕೆಯ ಅವತಾರವೆಂದು ಜನ ತಿಳಿಯುತ್ತಿದ್ದರಂತೆ. ಆಕೆ ಮುಟ್ಟಿ ಹರಸಿದ ಮಕ್ಕಳು ಧೀರ್ಘಾಯುಷಿಗಳಾಗಿತ್ತಾರೆಂಬುದು ನಂಬಿಕೆ ಜನರಲ್ಲಿ ಇತ್ತು. ರಾಣಿಬೆನ್ನೂರಿನಲ್ಲಿ ಇಂದಿಗೂ ಗಿರಿಯಮ್ಮ ನಿಗೆ ಎರೆಯುತ್ತಿದ್ದರೆಂದು ತಿಳಿಯುವ ಬಚ್ಚಲಮನೆ ಇದ್ದು, ಅಲ್ಲಿ ಮಕ್ಕಳನ್ನು ಕೂಡಿಸಿ ಎರೆದರೆ ಮಕ್ಕಳ ಪೀಡೆ ಪರಿಹಾರವಾಗುತ್ತದೆ ಎಂಬ ನಂಬಿಕೆ. ಇಂಥ ಭಕ್ತೆ ಹರಸಿದರೆ ತಮ್ಮ ಕಷ್ಟಗಳು ನೀಗುತ್ತದೆ ಎಂಬ ನಂಬಿಕೆ ಜನರಲ್ಲಿ ಬಲವಾಗುತ್ತ ನಡೆದು ಸುತ್ತಮುತ್ತಲ ಪ್ರದೇಶಕ್ಕೆಲ್ಲಾ ಹರಡಿ ತಮ್ಮ ದೈಹಿಕ ಮತ್ತು ಸಾಂಸಾರಿಕ ತೊಂದರೆಗಳಿಂದ ನೊಂದವರು ಆಕೆಯ ಆಭಯವನ್ನು ಹರಸಿ ಬರುತ್ತಿದ್ದರು.

ಅಕೆಯ ಮಹಿಮೆಯನ್ನು ಕೇಳಿ ಅಂಗ್ಲಸರದಾರನೊಬ್ಬ ಆಕೆಯ ದರ್ಶನಕ್ಕೆ ಬಂದು ಶಾನುಭೋಗರ ಮನೆತನಕ್ಕೆ ದೇಶಪಾಂಡೆ, ಎಂಬ ಬಿರುದನಿತ್ತು ಆ ಗ್ರಾಮದ ಸ್ವತ್ತು ವೃತ್ತಿಗಳನ್ನು

ಅನುಭವಿಸುವ ಸನ್ನದನ್ನು ಕೊಟ್ಟದಾಗಿ ತಿಳಿದುಬರುತ್ತದೆ. ಹೀಗೆಯೇ ಪುಂಗನೂರಿನ ರಾಜಕುಮಾರನಿಗೆ ಕಣ್ಣು ಕಾಣಿಸದಂತಾದಾಗ ಆತನು ಗಿರಿಯಮ್ಮನ ಬಳಿ ಬರಲು ಆಕೆ ನಂದಾದೇವಿಯ ಕಪ್ಪನ್ನು ಆತನ ಕಣ್ಣಿಗೆ ಹಚ್ಚಿ ಬರಿಸಿದ್ದಳಂತೆ. ಈ ಉಪಕಾರಕ್ಕಾಗಿ ಪುಂಗನೂರಿನ ಕುಮಾರನಹಳ್ಳಿಯನ್ನು ಮೈಸೂರುರಸರಿಂದ ಕ್ರಯಕ್ಕೆ ಕೊಂಡು ಗಿರಿಯಮ್ಮನ ನೆಚ್ಚಿನ ದೈವ ರಂಗನಾಥನ ದೇವಾಲಯಕ್ಕೆ ಕೊಟ್ಟು ಅದರ ಉತ್ಪತ್ತಿಯಲ್ಲಿ ದೇವಸ್ಥಾನದಲ್ಲಿ ನಿತ್ಯೋತ್ಸವ ನಡೆಯುವ ಏರ್ಪಾಡು ಮಾಡಿದಲ್ಲದೆ ದೇವಸ್ಥಾನದ ಮುಂದೆ ಬಂದು ಪುಷ್ಕರಣಿಯನ್ನು ಕಟ್ಟಿಸಿ ಹೂದೋಟವನ್ನು ಮಾಡಿಸಿದ ಎಂದು ಹೇಳಲಾಗಿದೆ.

ಅಕ್ಕಮಹಾದೇವಿ ಮತ್ತು ಗಿರಿಯಮ್ಮಳು ತಮ್ಮ ದಾಂಪತ್ಯ ಜೀವನದಿಂದ ಭಕ್ತಿ ಮಾರ್ಗವನ್ನು ಕಂಡುಕೊಂಡಿದ್ದಾರೆ.ಅಕ್ಕಮಹಾದೇವಿ ಸಂಸಾರದಿಂದ ಹೊರನಡೆಯುವ ಅನಿವಾರ್ಯತೆ ಮತ್ತು ಸಂದಿಗ್ಧ ಪರಿಸ್ಥಿತಿ ಹಾಗೆ ಶಿವಭಕ್ತಿಯ ಕಡೆ ತನ್ನ ಮನಸ್ಸುಹರಿಸುತ್ತಾಳೆ. ಗಿರಿಯಮ್ಮಳು ಇದಕ್ಕೆ ತದ್ವಿರುದ್ಧವಾಗಿ ಪವಾಡ ಸದೃಶ ಸ್ವರೂಪಿಯಾಗಿ ಪರಿವರ್ತನೆ ಹೊಂದುವುದನ್ನು ನೋಡಬಹುದಾಗಿದೆ.

**ಉ)ವೃದ್ಧಾಪ್ಯಾವಸ್ಥೆ:–**

ನಡೆಯದ ನುಡಿಗಡಣ,ಮಾಡದ ಕಲಿತನ
ಚಿತ್ರದ ಸತಿಯ ಶೃಂಗಾರವದೇತಕೆ ಪ್ರಯೋಜನ
ಎಲೆಯಿಲ್ಲದ ಮರನು,ಜಲವಿಲ್ಲದ ನದಿಯು
ಗುಣಿಯಿಲ್ಲದವಗುಣಿಯ ಸಂಗವದೇತಕೆ ಪ್ರಯೋಜನ
ದಯವಿಲ್ಲದ ಧರ್ಮವು,ಭಯವಿಲ್ಲದ ಭಕ್ತಿಯು
ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ
ಎನ್ನ ದೇವ ಚನ್ನಮಲ್ಲಿಕಾರ್ಜುನ,ಲಿಂಗೈಕ್ಯವು
ಪ್ರಾಣ ಗುಣವರಿಯದವರ ಕೂಡೆ ಪ್ರಸಂಗವೇತಕೆ?[66]

ಜನಸಾಮಾನ್ಯರು ತಮ್ಮ ದಿನನಿತ್ಯದ ವಸ್ತುಸ್ಥಿತಿಯನ್ನು ಮತ್ತು ತಾವು ಮಾತಾಡುವುದಕ್ಕೆ ಮತ್ತು ಮಾಡುವ ಕೆಲಸಕ್ಕೆ ಯಾವ ರೀತಿ ವ್ಯತ್ಯಾಸವಿರುತ್ತದೆ. ನುಡಿದಂತೆ ನಡೆ ಎಂಬ ಮಾತನ್ನು ಅಕ್ಕ ಸಮರ್ಥಿಸಿಕೊಂಡಿದ್ದಾರೆ.

ಅಕ್ಕ ಶ್ರೀಶೈಲದ ಉತ್ತುಂಗ ಶಿಖರವನ್ನೇರಿದಳು. ಶ್ರೀಶೈಲ ಸುಂದರ ಕ್ಷೇತ್ರ ಕಣ್ಣು ಹಾಯಿಸಿದ ಕಡೆ ಗಿಡಮರ ಬಳ್ಳಿಗಳು ಹೂಬಿಟ್ಟ ಅವುಗಳ ಚಲುವು ದೃಷ್ಟಿಯನ್ನು ಅಲುಗಿಸಲು ಅಸ್ಪದ ಕೊಡುತ್ತಿರಲಿಲ್ಲ. ಹುಲ್ಲುಗಾವಲಿನ ಹಸುರು ಎಂಥ ಪ್ರಕ್ಷುಬ್ಧ ಮನಸ್ಸಿಗಾದರೂ ನೆಮ್ಮದಿಯನ್ನು ನೀಡುತ್ತಿತ್ತು. ಹಕ್ಕಿಗಳ ಹಾಡು ನಿರ್ಝರಗಳ ನಿನಾದದೊಡನೆ ಬೆರತು ಅಪೂರ್ವ ಸ್ವರಮೇಳದ ಸೃಷ್ಟಿಯಾಗಿತ್ತು.

ಇದೇ ಚನ್ನಮಲ್ಲಿಕಾರ್ಜುನನ ಖಚಿತವಾದ ನೆಲೆ, ಎಂದು ಮಹಾದೇವಿಗೆ ಬಾಸವಾಯಿತು. ಎಲ್ಲ ಕಡೆಯು ಅವನಿರುವಂತೆ ತೋರಿತು. ವನವೆಲ್ಲಾ ನೀವೆ, ತರುವಿನೊಳಗಾಡುವ ಖಗಮೃಗವೆಲ್ಲಾ ನೀವೆ ಸರ್ವಭರಿತವಾಗಿ ನನಗೆ ಮುಖತೋರಿಸಿ, ಎಂದು ಅವಳು ಮಲ್ಲಿಕಾರ್ಜುನನ್ನು ಪ್ರಾರ್ಥಿಸಿದಳು. ಅವನ ದರ್ಶನಕ್ಕಾಗಿ ಹಾತೊರೆದಳು. ಚಿಲಿಮಿಲಿ ಎಂದೊಡುವ ಗಿಳಿಗಳನ್ನು ಸ್ವರವೆತ್ತಿ ಹಾಡುವ ಕೋಗಿಲೆಗಳನ್ನೂ, ಎರಗಿ ಬಂದು ಆಡುವ ತುಂಬಿಗಳನ್ನು, ಕೇಳದ ತಡಿಯೊಳಗಾಡುವ ಹಂಸಗಳನ್ನು,

ಗಿರಿಗಹ್ವರದೊಳಗಾಡುವ ನವಿಲುಗಳನ್ನು ಅವಳು ಆರ್ತಳಾಗಿ ವಿಚಾರಿಸಿದಳು. ಚನ್ನಮಲ್ಲಿಕಾರ್ಜುನನ್ನು ನೀವು ಕಂಡಿಲ್ಲವೇ. ಅವನೆಲ್ಲಿದ್ದಾನೆ? ಹೇಳಿ ಎಂದು ದೈನ್ಯದಿಂದ ಕೇಳಿದಳು.

ಬಹಳ ಕಾಲ ತನ್ನ ಹೃದಯವನ್ನು ಹರಿದು ಕರುಳನ್ನು ಕತ್ತರಿಸಿ ಹಾಡಬೇಕಾಗಿ ಬರಲಿಲ್ಲ. ಕೆಂಪಾದ ಹೊಳೆಯುವ ಜಡೆಗಳ ರತ್ನಖಚಿತ ಕರೀಟಧಾರಿಯಾದ ಬೆಳಗುವ ಹಲ್ಲುಗಳ, ನಗೆಮೊಗದ, ಕಾಂತಿಯಿಂದ ತುಂಬಿದ ಕಣ್ಣುಗಳ, ಇವೆಲ್ಲದರಿಂದ ಹದಿನಾಲ್ಕು ಲೋಕಗಳನ್ನು ಬೆಳಗುವ ದಿವ್ಯಸ್ವರೂಪವನ್ನು ಅವಳು ಬಹುಬೇಗನೇ ಕಂಡಳು, ಇಂದಿಗೆ ನನ್ನ ಕಣ್ಣಿನ ಬರ ತೀರಿತು. ಎಂದು ತೃಪ್ತಿಯಿಂದ ಹೇಳಿದಳು. ಲೋಕದ ಮಹಾಶಕ್ತರೆನಿಸಿದವರೆಲ್ಲಾ ತಲೆ ಬಾಗುವ ಶ್ರೇಷ್ಠ ಮೂರ್ತಿಯ ದರ್ಶನ ಅವಳಿಗಾಯಿತು. ಅದಿಶಕ್ತಿಯೊಡನೆ ಕೂಡಿರುವ ಪರಮ ಗುರು ಚನ್ನಮಲ್ಲಿಕಾರ್ಜುನನ ನಿಲುವನ್ನು ಕಂಡು ಬದುಕಿದೆ ಎಂದು ಅಕ್ಕ ಹೇಳಿಕೊಂಡಳು. ಈ ದಿವ್ಯ ದರ್ಶನದಂದ ಅಕ್ಕ ಉರಿಹತ್ತಿದ ಕರ್ಪೂರವದಳು. ಬೆಳಗು ಬೆಳಗನ್ನು ಕೂಡಿತು. ಬಯಲು ಬಯಲನ್ನು ಸೇರಿತು. ಈ ರೀತಿ ಅಕ್ಕ ಕದಳಿಯಲ್ಲಿ ತನ್ನ ಅಂತ್ಯವನ್ನು ಕಂಡಳು.

ಮನದ ಚಿಂತೆಯ ಬಿಡಿಸೊ ಮಾಧವ ಮುಕುಂದ ಹರಿ
ದನುಜಾರಿ ದಯಾವಾರಿಧಿ
ಅನುದನದಿ ನಿಮ್ಮ ಚರಣವ ನಂಬದವರಿಗಿಂಥ
ಬಿನುಗುರಿತಗಳು ಭಾವಿಸುವುದ್ಯಾತಕೊ ಸ್ವಾಮಿ[೧೨]

ಹೆಳವನಕಟ್ಟೆ ಗಿರಿಯಮ್ಮಳು ತನ್ನ ಕೊನೆಯ ದಿನಗಳನ್ನು ತನ್ನ ವಿಷ್ಣುವಿನ ಹುಡುಕಾಟದಲ್ಲಿ ಕಳೆಯುತ್ತಾಳೆ. ಮೈಲಾರ, ಕೊಕ್ಕನೂರ ಗೋಕರ್ಣ, ಪಿಳ್ಳಂಗಿರಿ ಮುಂತಾದ ಸ್ಥಳಗಳಿಗೆ ಯಾತ್ರೆ ಮಾಡುತ್ತಿದ್ದಾಗ ಆಕೆಗೆ ನೀನು ಇಲ್ಲಿಂದ ಕುಂಬಳೂರು ದಾಗಿನಕಟ್ಟೆ ಮಾರ್ಗವಾಗಿ 'ಕಮ್ಮಾರಗಟ್ಟೆಗೆ ಹೋಗು, ಅಲ್ಲಿ ನಿನಗೆ ಮಾರುತಿ ದರ್ಶನವಾಗುತ್ತದೆ. ಎಂಬ ವಾಣಿ ಕೇಳಿಸಿತಂತೆ, ಅದರಂತೆ ಗಿರಿಯಮ್ಮ ಕಮ್ಮಾರಗಟ್ಟೆಗೆ ಹೋದಳೆಂಬ ಅಭಿಪ್ರಾಯವಿದೆ. ಕಮ್ಮಾರಗಟ್ಟೆ ತುಂಗಾಭದ್ರ ನದಿಯ ತೀರದಲ್ಲಿ ಹೊನ್ನಾಳಿಗೆ ಸಮೀಪದಲ್ಲಿರುವ ಸ್ಥಳ ಅಲ್ಲಿ ಗಿರಿಯಮ್ಮನೇ ನದಿಗೆ ಸೋಪಾನವನ್ನು ಮಾರುತಿಗೆ ದೇವಸ್ಥಾನವನ್ನು ಕಟ್ಟಿಸಿದಳಂತೆ, ಅವಳ ಅಂತ್ಯಕಾಲದಲ್ಲಿ ಅಲ್ಲ ಮಾರುತಿಯ ದರ್ಶನವು ಆಗಿ, ಅದೇ ತುಂಗಾಭದ್ರೆಯ ಪೂರ್ಣ ಪ್ರವಾಹದಲ್ಲಿ ಶಾವಣ ಶುದ್ದಪಂಚಮಿಯಂದು ಆಕೆ ಅದೃಶ್ಯಳಾದಳೆಂದು[೧೩] ಹೇಳುತ್ತಾರೆ. ಪಂಚಮಿಯ ರಥೋತ್ಸವ ನಡೆಯುತ್ತಿದೆಯಂತೆ ಹೇಳಲಾಗಿದೆ.

ಗಿರಿಯಮ್ಮ ತಾನು ನಂಬಿದ ದೈವವನ್ನು ಸಾಕ್ಷಾತರಿಸಿಕೊಂಡು ಮಹಾಭಕ್ತಿಯಷ್ಟೆ ಅಲ್ಲ, ಆಕೆಯನ್ನು ನಂಬಿ ನಮಸ್ಕರಿಸುವವರ ದೇವಿಯಾಗಿಯೂ ನಿಂತವಳು. ಇಂದಿಗೂ ಆ ಸುತ್ತಲಿನ ಪ್ರಾಂತ್ಯದ ಜನ ಆಕೆಯನ್ನು ದೇವರೆಂದೇ ಭಾವಿಸಿ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ರಂಗನಾಥ ಸ್ವಾಮಿಯ ದೇವಾಲಯದ ಆವರಣದಲ್ಲೆ ಭಕ್ತರು ಅವಳಿಗೂ ಗುಡಿಯೊಂದನ್ನು ಕಟ್ಟಿ ಪೂಜಿಸುತ್ತಿರುವುದು ಅವಳ ಹಿರಿಮೆಗೂ ಜನಪ್ರಿಯತೆಗೂ ಸಾಕ್ಷಿಯಾಗಿದೆ ಎನ್ನಬಹುದು.

ಅಕ್ಕ ಮತ್ತು ಗಿರಿಯಮ್ಮ ಅಂತಿಮವಾಗಿ ದೈವತ್ವದ ನೆಲೆಯನ್ನು ಕಂಡುಕೊಳ್ಳುತ್ತಾರೆ. ಅಕ್ಕಮಹಾದೇವಿ ಆಶಾವಾದಿಯಾಗಿ ಕಂಡರೂ ತನ್ನ ಭಕ್ತಿಸಾಗರದಲ್ಲಿ ಮುಳುಗಿ ಹಲವಾರು ರೀತಿಯ ನೋವು ಸಂಕಟಗಳನ್ನು ಅಂದರೆ ತನ್ನ ಶಿವನನ್ನು ಕಾಣಲು ಹಂಬಲಿಸುವ ಅವಳ ಚಿತ್ತ ವ್ಯಾಕುಲ ಮನಸ್ಸು

ವಿಚಿತ್ರವೆಂಬಂತೆ ಕಂಡುಬರುತ್ತದೆ. ಗಿರಿಯಮ್ಮಳ ಬದುಕಿನಲ್ಲಿ ಎಲ್ಲವೂ ಅಂದುಗೊಂಡಂತೆ, ಸಮಾಜಕ್ಕೆ ಪೂರಕವೆಂಬಂತೆ, ದೇವತೆಯಂತೆ ಕಂಡು ತಾನು ದೈವತ್ವದ ನೆಲೆಯನ್ನು ಕಾಣುತ್ತಾಳೆ. ಇವಳ ಜೀವನದುದ್ದಕ್ಕೂ ಯಾವುದೇ ಹಂಬಲಿಕೆ ಗುಣತ್ವ ಕಂಡುಬರುವುದಿಲ್ಲ.

ಭಾರತದಲ್ಲಿನ ಭಕ್ತಿಪಂಥದ ಬೆಳವಣಿಗೆ ದ್ರಾವಿಡ ದೇಶದಲ್ಲಿ ಹುಟ್ಟಿ ಕರ್ನಾಟಕದಲ್ಲಿ ಬೆಳೆದು ಮಹಾರಾಷ್ಟ್ರದಲ್ಲಿ ಕೊಂಚ ಕಾಲವಿದ್ದು ಗುಜರಾತಿನಲ್ಲಿ ಜೀರ್ಣವಾಯಿತು

ಉತ್ಪನಾ ದ್ರಾವಿಡೇ ಚಾಹಂ
ಕರ್ನಾಟೇ ವೃದ್ದಿ ಮಾಗತಾ
ಸ್ಥಿತಾ ಕಿಂಚನ್ಮಹಾರಾಷ್ಟ್ರೇ
ಗುರ್ಜರೆ ಜೀರ್ಣತಾಂಗತಾ[೧೪]

ಭಾರತದಲ್ಲಿ ಭಕ್ತಿಪಂಥದ ಎಲ್ಲೆ ಇತಿಹಾಸವನ್ನು ಪದ್ಮಪುರಾಣ ದ ಮೂಲಕ ತಿಳಿಯಬಹುದು. ಭಗವಂತನ ಅರಿವು ಮೂಡಿದರೆ ಇಡೀ ವಿಶ್ವವೇ ನಮ್ಮದು. ಇಲ್ಲಿ ಭಯದ ಸರಮಾಲೆ ಹುಟ್ಟುವಾಗ ಇರುವಾಗ ಸಾಯುವಾಗ ಭಯ, ಇದಕ್ಕಾಗಿ ರಕ್ಷೆ ಬೇಕು ಮನುಷ್ಯನಿಗೆ ಮಾನಸಿಕವಾಗಿ ರಕ್ಷಣೆ ನೀಡಲು ಭಕ್ತಿ ಅವಶ್ಯಕವಾಗಿ ಬೇಕಾಗುತ್ತದೆ.

**ಅಡಿ ಟಿಪ್ಪಣಿ**

೧. ಡಾ॥ ಎಲ್. ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್ ಪ್ರಕಾಶನ, ಮೈಸೂರು, ೨೦೧೨ ಪುಟ: ೧೫೮
೨. ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ: ೧೫೭
೩. ಬರಗೂರು ರಾಮಚಂದ್ರಪ್ಪ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಆಕಾಡಮಿ ೧೯೯೩ ಪುಟ: ೨೬
೪. ಡಾ॥ ಎಲ್. ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್ ಪ್ರಕಾಶನ, ಮೈಸೂರು ೨೦೧೨ ಪುಟ: ೧೩೭
೫. ಅದೇ, ಪುಟ: ೧೨೪
೬. ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ: ೧೫೦
೭. ಡಾ॥ ಎಲ್.ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್ ಪ್ರಕಾಶನ, ಮೈಸೂರು, ೨೦೧೨ ಪುಟ: ೧೨೯
೮. ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ: ೧೫
೯. ಡಾ॥ ಎಲ್. ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್ ಪ್ರಕಾಶನ, ಮೈಸೂರು, ೨೦೧೨ ಪುಟ: ೫೫
೧೦. ಅದೇ ಪುಟ: ೧೬೧
೧೧. ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ:೧೫೩
೧೨. ಅದೇ ಪುಟ: ೧೪
೧೩. ಪ್ರೊ॥ ಹೆಚ್ ಎಂ ಮರುಳಸಿದ್ದಯ್ಯ, ಭಕ್ತಿಪಂಥದಲ್ಲಿ ಸಮಾಜಕಾರ್ಯದ ಬೇರುಗಳು, ಪ್ರಕಾಶನ ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೧೯೯೪, ಪುಟ: ೩೨

## <u>ಅಧ್ಯಾಯ: ೪</u>

## <u>ಅಕ್ಕಮಹಾದೇವಿ-ಹೆಳವನಕಟ್ಟೆ ಗಿರಿಯಮ್ಮ ತೌಲನಿಕ ಅಧ್ಯಯನ:-</u>

ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮ ಇವರ ಜೀವನದ ಬಗ್ಗೆ ತಿಳಿಯಲು ಹಲವಾರು ಕಾವ್ಯಗಳು ಸಹಾಯಕವಾಗುತ್ತವೆ. ಅಕ್ಕನನ್ನು ಕುರಿತು ಹರಿಹರನಿಂದ ಹಿಡಿದು ರಾಚಕವಿಯವರೆಗೆ ರಚಿತವಾಗಿರುವ ಸ್ವತಂತ್ರ ಕಾವ್ಯಗಳು ಜೀವನ ಚರಿತ್ರೆ ತಿಳಿಸುವಂಥವುಗಳಾಗಿವೆ. ಅಕ್ಕ ಮತ್ತು ಗಿರಿಯಮ್ಮ ಸಮಾಜಕ್ಕೆ ಯಾವ ರೀತಿಯಾಗಿ ಮುಖಾಮುಖಿಯಾದರು, ಕಟ್ಟುಪಾಡುಗಳನ್ನು ವಿರೋಧಿಸಿದಂಥ ರೀತಿಯನ್ನು ಭಕ್ತಿಯ ಮೂಲಕ ಹೇಗೆ ಬದಲಾಯಿಸಿದರು ಎಂಬುದನ್ನು ಅಧ್ಯಯನ ಕೈಗೊಳ್ಳಲಾಗಿದೆ.

ಎ.ಕೆ.ರಮಾನುಜನ್ ರವರು ಮಹಿಳೆಯರ ಸಂತರ ಬದುಕನ್ನು ಕುರಿತು ಐದು ಹಂತಗಳಲ್ಲಿ ಗುರ್ತಿಸುತ್ತಾರೆ.

೧)ಚಿಕ್ಕಪ್ರಾಯದಲ್ಲೆ ದೇವರಿಗೆ ಅರ್ಪಿಸಿಕೊಳ್ಳುವುದು.

೨)ಮದುವೆಯನ್ನು ನಿರಾಕರಿಸುವುದು

೩)ಸಾಮಾಜಿಕ ಕಟ್ಟುಕಟ್ಟಳೆಗಳನ್ನು ವಿರೋಧಿಸುವುದು

೪)ದೀಕ್ಷೆ

೫)ದೇವರನ್ನು ಮದುವೆಯಾಗುವುದು[೧]

ಈ ಐದು ಹಂತಗಳಲ್ಲಿ ಶರಣೆಯರಿಗೆ ಹೋಲಿಸಿಕೊಂಡರೆ ಮಹಿಳಾಸಂತರಾಗಿ ಗೊಗ್ಗವೆ,ಬೊಂತದೇವಿ, ಅಕ್ಕಮಹಾದೇವಿಯನ್ನು ಗುರ್ತಿಸಬಹುದು.

ಅಕ್ಕಮಹಾದೇವಿ-ಹೆಳವನಕಟ್ಟೆ ಗಿರಿಯಮ್ಮ ರವರ ವಚನ ಮತ್ತು ಕೀರ್ತನೆಗಳಲ್ಲಿ ಮೂಡಿದ ಹಲವಾರು ರೀತಿಯ ಸಂಘರ್ಷಗಳು ಮತ್ತು ಅವರ ದೃಷ್ಟಿಕೋನದ ಅಂತರವನ್ನು ಈ ಕೆಳಗಿನಂತೆ ವಿಭಾಗೀಕರಿಸಿ ಅಧ್ಯಯನ ಕೈಗೊಳ್ಳಲಾಗಿದೆ.

### <u>೧ ಸ್ತ್ರೀ-ಪುರುಷ ಮುಖಾಮುಖಿ:-</u>

ಅಕ್ಕಮಹಾದೇವಿ ಹೆಳವನಕಟ್ಟೆ ಗಿರಿಯಮ್ಮನ ವಚನ ಮತ್ತು ಕೀರ್ತನೆಗಳಲ್ಲಿ ಸ್ತ್ರಿ ಪುರುಷರ ಬಗ್ಗೆ ಉಲ್ಲೆಖವಿದೆ. ಬಾಲ್ಯದ ಜೀವನದಿಂದ ಕೌಟುಂಬಿಕ ಜೀವನ ಮತ್ತು ವೃದ್ದಾಪ್ಯ ಜೀವನದವರೆಗೆ ಕಂಡುಂಡ ಹಲವಾರು ಘಟ್ಟಗಳಲ್ಲಿ ಸ್ತ್ರೀಪುರುಷ ಚಿತ್ರಣಗಳು ಕಂಡುಬರುತ್ತದೆ. ಕೌಶಿಕ, ಬಸವಾದಿಗಳು, ಚನ್ನಮಲ್ಲಿಕಾರ್ಜುನ, ಕಿನ್ನರಿ ಬೊಮ್ಮಯ್ಯನ ಪ್ರಸಂಗ, ಮತ್ತು ರಂಗಯ್ಯ, ತಿಪ್ಪರಸ, ಗೋಪಾಲದಾಸರು ಸುಮತೀಂದ್ರರು, ಪುಂಗನೂರಿನ ರಾಜಕುಮಾರ ಯಾವುದೇ ಪಾತ್ರವಾಗಿರಬಹುದು. ವಿಭಿನ್ನತೆಗೆ ಸಾಕ್ಷಿಯಾದ ಪಾತ್ರಗಳಾಗಿವೆ. ಪಾತ್ರಗಳನ್ನು ವಿಶ್ಲೇಷಿಸುವ ಮೊದಲು ಸ್ತ್ರೀಪುರುಷರ ನಡುವಿನ ಭಿನ್ನತೆ ಮತ್ತು ಅಸಮಾನತೆ ಬಗ್ಗೆ ತಿಳಿಯಬೇಕಾಗಿದೆ. ಸ್ತ್ರಿಪುರುಷ ನಡುವಿನ ಅಸಮಾನತೆಗಳಲ್ಲಿ ಭಿನ್ನತೆಗಳಿವೆ. ಸ್ತ್ರೀಪುರುಷರ ದೇಹ ರಚನೆ ಪ್ರಧಾನವಾದ ಭಿನ್ನತೆಯನ್ನು ತೋರಿಸುತ್ತದೆ. ಬುದ್ದಿ ಮತ್ತು

ಮನೋಭಾವಗಳಲ್ಲಿನ ಭಿನ್ನತೆ ಗೌಪ್ಯವಾಗುತ್ತದೆ. ಈ ಎರಡು ವಿಶೇಷತೆಗಳೂ ವಿಶೇಷತೆಗಳಾಗಿದೆಯೇ ಹೊರತು ಮೇಲು ಕೀಳಿನ ಅಸಮಾನತೆಗಳು ಇಲ್ಲಿಲ್ಲ. ಆದರೆ ಈ ಭಿನ್ನತೆಗಳನ್ನು ಶತ್ರುಗಳಂತೆ ವ್ಯವಸ್ಥೆ ಕಾಣುತ್ತದೆ. ಈ ವ್ಯವಸ್ಥೆ ಸ್ತ್ರೀ ಪುರುಷರ ನಡುವಣ ಜೈವಿಕ ವ್ಯತ್ಯಾಸಗಳನ್ನು ಅತಿಯಾಗಿ ವೈಭವೀಕರಿಸಿ ಭಿನ್ನ ಜೈವಿಕತೆಯ ಕಾರಣದಿಂದಾಗಿಯೇ ಸ್ತ್ರೀ ಪುರುಷರು ಸಮಾಜದಲ್ಲಿ ಸಮಾನ ಪಾತ್ರಗಳನ್ನು ನಿರ್ವಹಿಸಲು ಸಾಧ್ಯವಿಲ್ಲ ಎಂಬ ಮಿಥ್ಯೆಯನ್ನು ಸೃಷ್ಟಿಸಿದೆ. ಈ ವ್ಯವಸ್ಥೆಯು ಪುರುಷರಿಗೆ ಅತಿ ಹೆಚ್ಚು ಪ್ರಧಾನ್ಯವನ್ನು ನೀಡಿ ಸ್ತ್ರೀಯರ ಪಾತ್ರವನ್ನು ಅವರು ಮಾಡುವ ಕಾರ್ಯಗಳನ್ನು ಗೌಣವಾಗಿ ಕಂಡು ಸ್ತ್ರೀಯರ ಮೇಲೆ ಕೆಲವು ನಿಬಂಧನೆಗಳನ್ನು ಹೇರುತ್ತದೆ. ಇದು ಸಹ ಸ್ತ್ರೀಪುರುಷರ ಅಸಮಾನತೆಗೆ ಕಾರಣವಾಗಿದೆ. ಸ್ತ್ರೀಯ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಲು ಲೈಂಗಿಕತೆ ಎನ್ನುವ ಅಸ್ತ್ರವನ್ನು ಬಳಸುವ ಪುರುಷರನ್ನು ವೈಭವೀಕರಿಸುವ ಸಾಹಿತಿಗಳನ್ನು ಸ್ತ್ರೀಪುರುಷ ಅಸಮಾನತೆಯನ್ನು ಬೆಂಬಲಿಸುವ ಸಮಾಜ ವಿಜ್ಞಾನಿಗಳನ್ನು ಟೀಕಿಸಿದ ಕೇಟ್ ಮಿಲೆಟ್ ಇಂತಹ ಬರಹಗಳು ಪುರುಷ ಪ್ರಾಧಾನ್ಯವನ್ನು ಎತ್ತಿಹಿಡಿಯುವ ಪ್ರಯತ್ನಗಳಾಗಿವೆ ಎಂದಿದ್ದಾಳೆ.[2]

ಯೋಗಿಗೆ ಯೋಗಿಣಿಯಾಗಿಹಳು ಮಾಯೆ
ಜೋಗಿಗೆ ಜೋಗಿಣಿಯಾಗಿಹಳು ಮಾಯೆ
ಶ್ರವಣಗೆ ಕಂತಿಯಾದಳು ಮಾಯೆ
ಯತಿಗೆ ಪದಾರ್ಥವಾದಳು ಮಾಯೆ
ಹೆಣ್ಣಿಗೆ ಗಂಡು ಮಾಯೆ
ಗಂಡಿಗೆ ಹೆಣ್ಣು ಮಾಯೆ
ನಿಮ್ಮ ಮಾಯೆಗೆ ನಾನಂಜುವಳಲ್ಲ ಚನ್ನಮಲ್ಲಿಕಾರ್ಜುನ[3]

ಮಾಯೆ ಎಂದರೆ ಆಗೋಚರವಾದದ್ದು. ಹೆಣ್ಣಿಗೆ ಗಂಡು ಮಾಯೆ, ಗಂಡಿಗೆ ಹೆಣ್ಣು ಮಾಯೆ. ಎಂದು ತುಂಬು ತಾರುಣ್ಯದಲ್ಲಿಯೇ ಮನೆ ಮಾರು ತ್ಯಜಿಸಿ ಲೌಕಿಕ ಸತಿತ್ವವನ್ನು ಧಿಕ್ಕರಿಸಿ ನಡೆದ ಅಕ್ಕನ ದಿವ್ಯದ ಹಂಬಲವು ಲೋಕವೆಂಬ ಮಾಯೆಗೆ ಅವಾಸ್ತವವಾಗಿ ಕಂಡಿದೆ.

ಕೌಶಿಕನ ಬಲವಂತಕ್ಕೆ ಅರಮನೆಗೆ ಹೋದರೂ ತನ್ನ ಶಿವಭಕ್ತಿ ಸಾಧನೆಗೆ ಅನುಕೂಲವಲ್ಲದ ವೈವಾಹಿಕ ಪ್ರಸ್ತಾಪವನ್ನು ಒಪ್ಪದೇ ವಿರಾಗಿಣಿಯಾಗಿ ಆಧ್ಯಾತ್ಮ ಸಾಧನೆಯಿಂದ ಶ್ರೇಷ್ಠ ಅನುಭಾವಿಯಾದಳೆನ್ನುವ ಚಾಮರಸ ಕವಿಯ ನಿಲುವನ್ನು ಎಳಂದೂರು ಹರೀಶ್ವರ, ವಿರೂಪಾಕ್ಷ ಪಂಡಿತ ಅದೃಶ್ಯಕವಿ ರಾಚಕವಿ, ಶಾಂತಲಿಂಗದೇಶಿಕ, ತೊಂಟದ ಸಿದ್ದಲಿಂಗಶಿವಯೋಗಿ ಮುಂತಾದ ಪ್ರಾಚೀನ ಕವಿಗಳು ಅನುಮೋದಿಸಿದ್ದಾರೆ.

ಮಾರ್ಕ್ಸವಾದದ ಪ್ರಕಾರ ಎರಡು ರೀತಿಯ ಸಮಾನತೆಯ ಪ್ರಶ್ನೆಗಳಿವೆ. ಒಂದು ಬಗೆಯ ಸಮಾನತೆಯ ಪ್ರಶ್ನೆಯು ಕ್ರಾಂತಿಪೂರ್ವ ಯುಗಕ್ಕೆ ಸಂಬಧಿಸಿದ್ದು. ಅವನವನ ಕೌಶಲ, ಸಾಮಾರ್ಥ್ಯ ಮತ್ತು ಅವನವನ ಕೆಲಸಕ್ಕೆ ತಕ್ಕ ಹಾಗೆ ಹಂಚಿಕೆಯು ಇರುತ್ತದೆ. ಇದು ಮೊದಲನೆಯ ಮಾದರಿ. ಈ ಮಾದರಿಯನ್ನೇ ಬಂಡವಾಳಷಾಹಿ ವ್ಯವಸ್ಥೆಯು ಕೂಡ ಅನುಸರಿಸುತ್ತದೆ. ಈ ಮಾದರಿಯು ವೈಯಕ್ತಿಕ ಸಾಧನೆ ಮತ್ತು ಸಾಮಾರ್ಥ್ಯವನ್ನು ಹೆಚ್ಚು ಎತ್ತಿಹಿಡಿಯುತ್ತದೆ. ಸಂಪನ್ಮೂಲ ಹಂಚಿಕೆಯು ಸಾಮಾರ್ಥ್ಯಕ್ಕೆ ಅನುಸಾರವಾಗಿ ಭಿನ್ನವಾಗುತ್ತದೆ. ಮತ್ತು ಅವನ ಸಾಮಾರ್ಥ್ಯವೂ ಕೂಡ ಸಹಜವಾಗಿಯೇ ಬೇರೆ

ರೀತಿಯದಾಗಿರುತ್ತದೆ. ಈ ದೃಷ್ಟಿಯಿಂದ ಎಲ್ಲರಿಗೂ ಒಂದೇ ರೀತಿಯ ಮಾನದಂಡವು ಸಾಧ್ಯವಿಲ್ಲ. ಪ್ರತಿಯೊಂದು ವ್ಯಕ್ತಿಯನ್ನು ಕೂಡ ಭಿನ್ನ ರೀತಿಯಲ್ಲಿ ನೋಡುವುದು ಮಾತ್ರವಲ್ಲ, ಅವನನ್ನು ಭೌತಿಕವಾಗಿ ಬೇರೆಗೊಳಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಅಕ್ಕಮಹಾದೇವಿ ಹೆಳವನಕಟ್ಟೆ ಗಿರಿಯಮ್ಮ ತಮ್ಮ ಜೀವನಶೈಲಿ, ಕೌಟುಂಬಿಕ ಹಿನ್ನೆಲೆ, ಭಕ್ತಿಯ ಉತ್ಕಟತೆ, ಸಾಂಸಾರಿಕ ಜೀವನದ ಭಿನ್ನತೆ ಇಂತಹ ಕೆಲವು ಅಂಶಗಳೇ ವಸ್ತುಗಳಾಗಿವೆ.

ಮೆಚ್ಚಿ ಬಂದನೆ ಮೋಹಕ್ಕೆ ಮರುಳಾದನೆ

ಹಚ್ಚಿಕಿ ಮಾತ ಹರಿಯು ತಾ ಕೇಳಿದನೆ

ನೆಚ್ಚಿ ಇದ್ದೆನೆ ಎನ್ನೊಳು ವಂಚಿಸಿದನೆ

ರಚ್ಚೆಗಿಕ್ಕಿದ ರಂಪು ಮಾಡಿದ ಕಾಣೆ[8]

ಭಾಗವತದಲ್ಲಿಯ ಪಾರಿಜಾತಪಹರಣಕ್ಕೆ ಹಿನ್ನಲೆಯಾಗಿ ಬರುವ ಈ ಘಟನೆಯನ್ನು ಕುರಿತು ಅನೇಕರು ಬರೆದಿರುವಂತೆ ಕಾಣುತ್ತದೆ.

ಸತ್ಯಭಾಮೆಯ ಸವತಿ ಮಾತ್ಸರ್ಯವನ್ನು ಪ್ರತಿಬಿಂಬಿಸುವ ಮತ್ತು ಕೃಷ್ಣ ತನ್ನ ಪ್ರೀತಿಯ ಹೆಂಡತಿಯ ಕೋಪಕ್ಕೆ ಮಣಿಯುವ ವಾತ್ಸಲಮಯಿ ಗಂಡನಾಗಿ ಕಾಣಿಸಿಕೊಳ್ಳುವ ಈ ಘಟನೆ ಗಿರಿಯಮ್ಮನನ್ನು ಸೆಳೆದ ಪರಿಣಾಮವಾಗಿ ಈ ಹಾಡು ರಚಿತವಾಗಿದೆ. ನಾರದಮುನಿ ದೇವಲೋಕದಿಂದ ತಂದ ಪಾರಿಜಾತ ಪುಷ್ಪವನ್ನು ಕೃಷ್ಣನಿಗೆ ಕೊಟ್ಟು ರುಕ್ಮಿಣಿಗೆ ಕೊಡುವಂತೆ ಹೇಳುತ್ತಾನೆ. ಅದರಂತೆ ಕೃಷ್ಣ ಮೇಲೆ ಸಿಟ್ಟಿಗೆದ್ದು ತಲ್ಲಣಿಸುತ ಎದೆ ಧಿಗಿಲೆಂದು ಭುಗಿಭುಗಿಲೆಂದು ಮನದಲ್ಲಿ ಅತಿನೊಂದು ಪ್ರಲಾಪಿಸುವ ಚಿತ್ರ ಸಹಜ ಸುಂದರವಾಗಿ ಬಂದಿದೆ. ಕೃಷ್ಣನಿಗೂ ತಾನೂ ಮಾಡಿದ ಕಾರ್ಯದ ಪರಿಣಾಮದ ಬಗ್ಗೆ ಚಿಂತೆ ಇದ್ದೇ ಇದೆ. ತುಂಬ ಸರಳವಾದ ಮಾತುಗಳಲ್ಲೇ ಈ ಚಿತ್ರವನ್ನು ಗಿರಿಯಮ್ಮ ಸೊಗಸಾಗಿ ತರುತ್ತಾಳೆ.

ಬಾಲ್ಯದಲ್ಲೇ ವಿವಾಹವಾದ ಗಿರಿಯಮ್ಮ ತನ್ನ ಕುಟುಂಬದವರ ವಿರೋಧವಿಲ್ಲದೇ ಸಂಸಾರದಲ್ಲಿದ್ದುಕೊಂಡೆ ತನ್ನ ಗಂಡನಾದ ತಿಪ್ಪರಸನಿಗೆ ಬೇರೆ ಇನ್ನೊಂದು ಮದುವೆಯನ್ನು ಮಾಡಿ ತನ್ನ ಆಧ್ಯಾತ್ಮಿಕ ಸಾಧನೆಯ ಕಡೆ ಮುಖ ಮಾಡಿ ನಿಲ್ಲುತ್ತಾಳೆ. ತನ್ನ ಭಕ್ತಿ ಮತ್ತು ಪವಾಡ ಸದೃಶ ದೃಶ್ಯಗಳ ಮೂಲಕ ಸುತ್ತಮುತ್ತಲಿನ ಜನರ ಮೆಚ್ಚುಗೆಗೆ ಪಾತ್ರವಾಗುವಂತಹ ಕೈಂಕರ್ಯಗಳನ್ನು ಗಿರಿಯಮ್ಮ ಮಾಡುತ್ತಾಳೆ. ತನ್ನ ಇಹದ ಗಂಡನನ್ನು ಬಿಟ್ಟು ಪರನಾದ ವಿಷ್ಣುವಿನ ಕಾಣದೇ ವಿರಹತಪ್ತಳಾಗಿ ಅಲಾಪಿಸುವ ಗಿರಿಯಮ್ಮನ ಸಂಘರ್ಷಚಿತ್ತವನ್ನು ಕಾಣಬಹುದಾಗಿದೆ.

ಗಿರಿಯಮ್ಮಳ ಸಮಕಾಲೀನ ಸಮಾಜದ ಆಚಾರ ವಿಚಾರ, ನಂಬಿಕೆಗಳು ಅನೇಕ ಕಡೆಗಳಲ್ಲಿ ಸಂದರ್ಭೋಚಿತವಾಗಿ ಮೈಪಡೆದಿದೆ. ಲವಕುಶರ ಹಾಡಿನಲ್ಲಿ ಬರುವ ಮಡದಿ ಜಾನಕಿದೇವಿ ಮಕ್ಕಳಿಲ್ಲನುತಲಿ ಮನದಿ ಚಿಂತಿಲಿ ಸೊರಗಿದಳು. ಕಂದರಿಲ್ಲದ ಬಾಳು ದುಡುಕೆನುತಲಿ ಕಂಗಳ ಜಲವ ತುಂಬಿದಳು. ಎಂಬ ಮಾತುಗಳು ಸಮಾಜದಲ್ಲಿ ಬಂಜೆಗಿದ್ದ ಸ್ಥಾನವನ್ನು ಸೂಕ್ಷ್ಮವಾಗಿ ಸೂಚಿಸುತ್ತದೆ. ಶಂಕರಗಂಡಿನ ಹಾಡಿನಲ್ಲಿ ಶಿವನ ಮಾತುಗಳಲ್ಲಿ ವಿವಾಹಿತ ಹೆಣ್ಣಿನ ಪಾರತಂತ್ರ್ಯದ ಬದುಕಿನ ಪರಿಚಯವಿದ್ದರೆ, ಸೀತಾಕಲ್ಯಾಣದಲ್ಲಿ ಮದುವೆಯ ಸಂದರ್ಭದ ಆಚಾರವಿಚಾರಗಳ ಚಿತ್ರಣವಿದೆ.

ಮನುಷ್ಯರೆಂದರೆ ಯಾರು? ಪ್ರಾಣಿಗಳಿಗೆ ಇಲ್ಲದ ಕೆಲವು ಅಂಶಗಳು ಮನುಷ್ಯರಲ್ಲಿ ಇವೆ. ಭಾಷೆ ಭಾವನಾತ್ಮಕ ಸಂಬಂಧಗಳು ಮನುಷ್ಯರಲ್ಲಿ ಕಾಣಿಸುತ್ತವೆ. ಮಾತಾನಾಡುವ ಕಾರಣಕ್ಕೆ ಭಾವಾನಾತ್ಮಕ

ಸಂಬಂಧದ ಕಾರಣಕ್ಕೆ ಮನುಷ್ಯರನ್ನು ಪ್ರಾಣಿಗಳಿಗಿಂತ ಬೇರೆಯೆಂದು ಕರೆಯುತ್ತೇವೆ. ಆದರೆ ಗಂಡು ಹೆಣ್ಣಿನ ಸಂಬಂಧ? ಪುರುಷ ಸ್ತ್ರೀಯರನ್ನು ಸಮಾನವಾಗಿ ಕಾಣುತ್ತಾನೆಯೇ ದೈಹಿಕ ವ್ಯತ್ಯಾಸವು ಹೇಗೆ ಶೋಷಣೆಗೆ ಕಾರಣವಾಯಿತೊ ಅದೇ ರೀತಿಯಲ್ಲಿ ಅದೇ ಮಾನದಂಡವನ್ನು ಇಟ್ಟುಕೊಂಡು ಸ್ತ್ರೀವಾದದ ಕೆಲವರು ಚರ್ಚೆಯನ್ನು ಮಾಡುತ್ತಾರೆ. ಆದರೆ ದೈಹಿಕ ವ್ಯತ್ಯಾಸದ ಚರ್ಚೆಯು ಮಾತ್ರ ಮಹಿಳಾವಾದದ ಗುರಿಯಾಗಬಾರದು. ಹಾಗೇ ನೋಡುವುದಿದ್ದರೆ ಮಹಿಳಾ ವಾದವೆನ್ನುವುದು ಪ್ರಜ್ಞಾಪೂರ್ವಕವಾದ ರಾಜಕೀಯ ಪ್ರತಿಕ್ರಿಯೆ. ಇದು ಕೇವಲ ದೇಹವಾದಿಯಲ್ಲ. ಹಾಗೆಯೇ ಮನುಷ್ಯರಲ್ಲಿನ ಗಂಡು ಹೆಣ್ಣು ಎಂಬ ಪ್ರತ್ಯೇಕ ವರ್ಗಿಕರಣದ ಚರ್ಚೆಯು ಚರಿತ್ರೆಯೂ ಅಲ್ಲ. ಗಂಡು ಹೆಣ್ಣಿನ ಲೈಂಗಿಕ ವ್ಯತ್ಯಾಸದ ಚರಿತ್ರೆಯನ್ನು ಹುಡುಕುವುದರಿಂದ ಉಪಯೋಗವಿಲ್ಲ, ಹಾಗೆಯೇ ಮಹಿಳೆಯರ ಯಾವುದಾದರೂ ಒಂದು ವಿರೋಧವನ್ನೇ ಮಹಿಳಾ ಚಳುವಳಿಯ ಸ್ವರೂಪವೆಂದು ಕರೆಯಬೇಕಿಲ್ಲ. ಅಕ್ಕ ಮತ್ತು ಗಿರಿಯಮ್ಮಳ ಜೀವನದಲ್ಲಿ ಕೂಡ ಅದೇ ರೀತಿಯಾದ ಲಿಂಗಸಂಬಂಧಿ ಪವಾಡಸದೃಶಗಳು ನಡೆಯುವುದನ್ನು ಕಾಣಬಹುದು.

ಮಹಾದೇವಿಯಕ್ಕನ ಕಾಮ ಸಂಹಾರಿತ್ವ ಮತ್ತು ಲೋಕವಿಲಕ್ಷಣ ವ್ಯಕ್ತಿತ್ವದ ಸತ್ವ ಪರೀಕ್ಷೆಯಂದೇ ವ್ಯಾಖ್ಯಾನಿತವಾಗಿರುವ ಕಿನ್ನರಿಬ್ರಹ್ಮಯ್ಯ ಮತ್ತು ಮಹಾದೇವಿಯಕ್ಕನ ಭೇಟಿಯ ಪ್ರಸಂಗವು ಹರಿಹರನ ಉಡುತಡಿಯ ಮಹಾದೇವಿಯಕ್ಕನ ರಗಳೆಯಲ್ಲಿ ಅತ್ಯಂತ ಸೂಚ್ಯವಾಗಿ ಪ್ರಸ್ಥಾಪಿತವಾಗಿದ್ದರೆ, ಮುಂದಿನ ಕಾವ್ಯಗಳಲ್ಲಿ ಮತ್ತು ಶೂನ್ಯಸಂಪಾದನೆಗಳಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಮಹಾದೇವಿಯಕ್ಕ ಮತ್ತು ಕಿನ್ನರಿಬ್ರಹ್ಮಯ್ಯನ ಭೇಟಿಯನ್ನು ಹರಿಹರ ಕವಿಯು ಶ್ರೀಶೈಲ ಪರಿಸರದಲ್ಲಿ ಪ್ರಸ್ಥಾಪಿಸುತ್ತಾನೆ. ಹುಟ್ಟೂರನ್ನು ತ್ಯಜಿಸಿ ನೇರವಾಗಿ ಶ್ರೀಶೈಲಕ್ಕೆ ಬಂದು ಲಿಂಗಪ್ರಾಣಿಯಾಗಿ ಶಿವಯೋಗ ಸಮಾಧಿಯಲ್ಲಿ ಕಾಲಕಳೆಯುತ್ತಿದ್ದ ಮಹಾದೇವಿಯಕ್ಕನನ್ನು ಕಿನ್ನರಿ ಬ್ರಹ್ಮಯ್ಯನವರು ಭೇಟಿಯಾಗುತ್ತಾರೆ. **ಕಿನ್ನರಿಬೊಮ್ಮಿ ತಂದೆಯು ಕಾಣುತಂ ಅಂದಂದನುಚಿತಕ್ಕೆ ಗೀತಮಂ ಪಾಡುತಂ,** ಎನ್ನುವ ಒಂದು ಸಾಲಿನಲ್ಲಿ ಹರಿಹರ ಕವಿಯು ಪ್ರಸ್ಥಾಪಿಸಿರುವ ಈ ಸಂಗತಿಯನ್ನು ಶೂನ್ಯಸಂಪಾದನೆಗಳು ಸುಧೀರ್ಘವಾಗಿ ಚಿತ್ರಿಸುತ್ತವೆ. ಚಾಮರಸ ಕವಿಯು ಈ ಪ್ರಸಂಗವನ್ನು ಕೈಬಿಟ್ಟಿದ್ದರೂ ಮುಂದಿನ ಬಹುತೇಕ ಪ್ರಾಚೀನ ಕವಿಗಳಲ್ಲಿ ಈ ಘಟನೆಯ ಪ್ರಸ್ಥಾಪವಿದೆ.

ಇದಕ್ಕೆ ಪ್ರತಿಕ್ರಿಯೆಯಾಗಿ ಮರುವ್ಯಾಖ್ಯಾನ ನೀಡಿದವನು ಶೂನ್ಯ ಸಂಪಾದನಕಾರರಾದ ಶಿವಗಣ ಪ್ರಸಾದಿ ಮಹಾದೇವಯ್ಯ, ಕಲ್ಯಾಣದ ದಾರಿಯಲ್ಲಿ ಈ ಘಟನೆ ನಡೆದಂತೆ ಮೊದಲ ಶೂನ್ಯ ಸಂಪಾದನೆ ಚಿತ್ರಿಸುತ್ತದೆ. ಮಹಾದೇವಿಯಕ್ಕನ ಕಾಮ ಸಂಹಾರಿತ್ವದ ಸ್ಥಾಪನೆಯೇ ಈ ಪರೀಕ್ಷೆಯ ಉದ್ದೇಶವಾಗಿದೆ. ಆದರೆ ಎರಡನೆಯ ಶೂನ್ಯ ಸಂಪಾದನೆಯಲ್ಲಿ ಪ್ರಸ್ತುತ ಪ್ರಸಂಗವು ಅನೇಕ ವಿಕೃತ ಕಲ್ಪನೆಗಳೊಂದಿಗೆ ವಿಸ್ತರಿಸಲ್ಪಡುತ್ತದೆ. ಮಹಾದೇವಿಯಕ್ಕನ ಲಾವಣ್ಯಕ್ಕೆ ಬೆರಗಾದ ಕಿನ್ನರಯ್ಯನು **ಈಕೆ ಲಿಂಗಾನುಭವ ಸಂಪನ್ನೆಯಾದರೆ, ಗುರುತಾಯೆಂದು ಶರಣೆಂಬೆನು. ಅಲ್ಲಿ ದೇಹ ಲಜ್ಜಾಭಿಮಾನ ಉಳ್ಳಡೆ ಸ್ತ್ರೀಯಾಗಿ ಕೈವಿಡಿದೆನು**[3] ಎಂದು ನಿಶ್ಚಯಿಸಿ ಮಹಾದೇವಿಯಕ್ಕನನ್ನು ಸಮಸುಖಕೂಟಕ್ಕಾಗಿ ಆಹ್ವಾನಿಸುತ್ತಾನೆ. ಆಗ ಮಹಾದೇವಿಯಕ್ಕ, **ಚನ್ನಮಲ್ಲಿಕಾರ್ಜುನನಲ್ಲದೇ ಮಿಕ್ಕಿನ ಪುರುಷರೆನಗೆ ಸಹೋದರ, ಛೀ ಹೋಗಾ ಮರುಳೆ,** ಎಂದು ಕಿನ್ನರಯ್ಯನಿಗೆ ತನ್ನ ದೈವೀ ದಾಂಪತ್ಯದ ಒಲವನ್ನು ತಿಳಿಸುತ್ತಾಳೆ. ಕಾಮಾತುರನಾದ ಬ್ರಹ್ಮಯ್ಯನು ಆಕೆಯನ್ನು ತುಡುಕಿ ಹಿಡಿಯಲು ತನ್ನ ಸರ್ವಾಂಗವು ಲಿಂಗಮಯವಾಗಿರುವುದನ್ನು ಪರೀಕ್ಷಿಸಿ ತಿಳಿಯೆಂದು ತನ್ನ ದೇಹವನ್ನು ಆತನಿಗೆ ಒಪ್ಪಿಸುತ್ತಾಳೆ. ಅಕ್ಕನ ಸರ್ವಾಂಗವು ಶಿವತತ್ವಮಯವಾಗಿರುವುದನ್ನು ಪರೀಕ್ಷಿಸಿ ತಿಳಿದುಕೊಂಡ ಕಿನ್ನರಯ್ಯನು ತನ್ನ ಅನುಚಿತ ವರ್ತನೆಗಾಗಿ ಪಶ್ಚಾತಾಪಪಟ್ಟುಕೊಂಡು ಕ್ಷಮೆಕೋರುತ್ತಾನೆ. ಮಹಾದೇವಿಯಕ್ಕನೇ ಆತನನ್ನು ಸಂತೈಸಿ ಸಹೋದರನೆಂದು

ಮನ್ನಿಸುತ್ತಾಳೆ. ನಿಃಕಾಮಿಯಾದ ಮಹಾದೇವಿಯಕ್ಕನ ನಿಲುವನ್ನು ಶರಣರಿಗೆ ಮನವರಿಕೆ ಮಾಡಲು ಅನುಭಾವಿ ಪ್ರಭುದೇವರು ಇಂತಹ ಅತಿರೇಕದ ಪರೀಕ್ಷೆಗಾಗಿ ಕಿನ್ನರಯ್ಯನನ್ನು ಕಳಿಸಿದರೆನ್ನುವುದಂತು ತೀರ ಅಸಂಗತವಾಗಿ ತೋರುತ್ತದೆ ಮತ್ತು ಅವಾಸ್ತವವೆನಿಸುತ್ತದೆ.

ಗಿರಿಯಮ್ಮಳು ತಾನು ಬಾಲ್ಯದಲ್ಲೇ ಹೆತ್ತವರನ್ನು ಕಳೆದುಕೊಂಡು ಅನಾಥ ಪರಿಸ್ಥಿತಿಯಲ್ಲಿ ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆಯುತ್ತಾಳೆ. ತನ್ನ ಭಕ್ತಿಯ ಉತ್ಕಟತೆಯಿಂದಾಗಿ ತನ್ನ ಮನೆಯಲ್ಲಿಯೇ ಪೂಜಾಕೈಂಕರ್ಯವನ್ನು ಮುಂದುವರಿಸುತ್ತಾಳೆ. ತದನಂತರ ವಿವಾಹವಾದ ನಂತರವೂ ಕೂಡ ಮುಂದುವರಿಕೆ ದಾರಿಯೂ ಕೂಡ ಸುಗಮವಾಗುತ್ತದೆ. ಗಿರಿಯಮ್ಮನ ಬದುಕಿನಲ್ಲಿ ಒಂದು ಪವಾಡ ಸದೃಶ ದೃಶ್ಯವೊಂದು ನಡೆಯುತ್ತದೆ. ಒಂದು ದಿನ ಗಿರಿಯಮ್ಮಳು ತನ್ನ ಕೋಣೆಯಲ್ಲಿ ಮಲಗಿರುವ ಸಂದರ್ಭದಲ್ಲಿ ತಿಪ್ಪರಸನು ಹೋಗಿ ನೋಡುತ್ತಾನೆ. ಗಿರಿಯಮ್ಮನನ್ನು ಘಟಸರ್ಪವೊಂದು ಸುತ್ತಿಕೊಂಡಿರುವಂತೆ ಕಂಡು ಆಕೆ ದೈವಾಂಶಸಂಭೂತಳೆಂದು ತಿಳಿದು ಆಕೆಗೆ ಯಾವ ರೀತಿಯೂ ಪೂಜಾಭಂಗವಾಗದಂತೆ ನೋಡಿಕೊಳ್ಳುತ್ತಾನೆ. ತನ್ನ ಅನನ್ಯ ಭಕ್ತಿಯಿಂದ ಸುತ್ತಮುತ್ತಲಿನ ರಾಜರಿಗೆ ಇವಳು ಪರಿಚಿತಳಾಗಿದ್ದು ದೈವಾಂಶಸಂಭೂತಳೆಂದು ಪ್ರಸಿದ್ದಿಯಾಗಿದ್ದಳು. ಪುಂಗನೂರಿನ ರಾಜಕುಮಾರನಿಗೆ ಕಣ್ಣು ಬರಿಸಿದ ಪ್ರಸಂಗ, ಮಳೆ ಬೆಳೆ ಇಲ್ಲದೇ ಬರಗಾಲ ಬಂದ ಕಾಲದಲ್ಲಿ ದೇವರಲ್ಲಿ ಪ್ರಾರ್ಥಿಸಿ ಮಳೆ ತರಿಸಿದಳೆನ್ನುವ ಪ್ರಸಂಗ, ಸುಮತೀಂದ್ರರು ಗಿರಿಯಮ್ಮಳನ್ನು ಮಹಾತ್ಮೆ ಎಂದು ಜಾಹೀರು ಮಾಡಿದ ಪ್ರಸಂಗ. ಗೋಪಾಲದಾಸರು ಇವಳನ್ನು ಅನುಗ್ರಹಿಸಿದ ರೀತಿ, ತನ್ನ ಸುತ್ತಿನ ಸಮಾಜಕ್ಕೆ ಉಪಕಾರಿಯಾಗಿ ಮನಸ್ಸಿನಲ್ಲಿ ಉಳಿಯುವಂತಳಾಗಿ, ದೇವರೆಂದೇ ಪೂಜೆ ಮಾಡುವುದನ್ನು ಇಂದಿಗೂ ಕಾಣಬಹುದು.

ಗಂಡು ಹೆಣ್ಣಿನ ಸಂಬಂಧದಲ್ಲಿ ಶ್ರೇಷ್ಠ-ಕನಿಷ್ಠವೆಂಬ ವರ್ಗಿಕರಣವನ್ನು ಮಾಡಿದರೆ ಹೆಣ್ಣನ್ನು ಮಾನವೀಯ ವರ್ಗಕ್ಕೆ ಸೇರಿಸಿದಂತೆ ಆಗುವುದಿಲ್ಲ. ಗಂಡು ಹೆಣ್ಣಿನ ಸಂಬಂಧದ ಪ್ರಶ್ನೆಯನ್ನು ಮಾನವೀಯ ಸಂಬಂಧದ ಪ್ರಶ್ನೆಯೆಂಬಂತೆ ಬಿಡಿಸಬೇಕು. ಗಂಡಲ್ಲಿ ಇಲ್ಲವಾದ ಲೈಂಗಿಕ ವ್ಯತ್ಯಾಸವು ಹೆಣ್ಣಿನಲ್ಲಿದೆಯೆಂಬ ಮಾತ್ರಕ್ಕೆ ಹೆಣ್ಣನ್ನು ದುರ್ಬಲವೆಂದು ಕರೆದರೆ ಮಾನವೀಯ ಸಂಬಂಧಗಳ ಅರ್ಥವನ್ನು ಕಳೆದುಕೊಂಡಂತೆ.[6] ಹೆಣ್ಣಿನ ಮೇಲೆ ಹೆಚ್ಚಾಗಿರುವ ಕಾರಣದಿಂದ ಅವಳ ಮೇಲೆ ಮಾನಸಿಕ ಒತ್ತಡವನ್ನು ಹೇರಲಾಗುತ್ತದೆ. ಬಾಲ್ಯದಿಂದಲೇ ಹೆಣ್ಣೆಂಬ ಕಾರಣಕ್ಕೆ ಶೋಷಣೆ ಮಾಡಲಾಗುತ್ತದೆ. ಇದರಿಂದ ಮಾನವೀಯ ಸಂಬಂಧಗಳು ಮಾನವೀಯ ಅಂತಃಕರಣವು ಕಳೆದುಕೊಂಡಂತಾಗುತ್ತದೆ. ಇದರ ಪರಿಣಾಮ ಮಾತ್ರ ದೊಡ್ಡದು. ಗಂಡು ಹಣ್ಣಿನ ನಡುವೆ ತಾರತಮ್ಯ ಇದ್ದಾಗ ಅದು ಸಮಾಜದ ಮೇಲೆ ಪರಿಣಾಮವನ್ನುಂಟುಮಾಡುತ್ತದೆ. ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮ ಇಂತಹ ಸಮಸ್ಯೆಗಳನ್ನು ಎದುರಿಸಿ ಹಣ್ಣು ತನ್ನದೇ ಆದ ಸ್ಥಾನವನ್ನು ಹೊಂದಿದ್ದಾಳೆ. ಸಮಾಜದಲ್ಲಿ ಗಂಡಿನಂತೆ ಅವಳಿಗೂ ಸ್ಥಾನಮಾನ ಇದೆ ಎಂದು ತೋರಿಸಿಕೊಟ್ಟವರು. ಸಾಮಾಜಿಕವಾಗಿ ಮಹಿಳೆಯರ ಸ್ಥಾನಮಾನವು ಒಂದು ಸಮಾಜದ ಅಭಿವೃದ್ದಿಯ ಪ್ರತೀಕವಾಗಿದೆ. ಸಮಾನತೆ ಮತ್ತು ಸ್ವಾತಂತ್ರ್ಯ ಎಂಬುದು ಕೆಲವರಿಗೆ ಮಾತ್ರವಲ್ಲದೆ ಸಮರ್ಪಕವಾಗಿ ಎಲ್ಲರಿಗೂ ಹಂಚಿಕೆಯಾಗಬೇಕು ಎನ್ನುವುದು ಈ ಭಾಗದ ಆಶಯವಾಗಿದೆ.

**ಅಡಿ ಟಿಪ್ಪಣಿ**

೧. ಅಕ್ಕಮಹಾದೇವಿ ವಚನಗಳು, ಸಾಂಸ್ಕೃತಿಕ ಮುಖಾಮುಖಿ, ರಹಮತ್ ತರೀಕೆರೆ, ಮುದ್ರಣ, ೨೦೦೫, ಪುಟ: ೧೪೪, ೧೪೬

೨. ಆರ್ ಇಂದಿರಾ, ಸ್ತ್ರೀವಾದ ದಿಕ್ಸೂಚಿ, ಸಮತಾ ಅಧ್ಯಯನ ಕೇಂದ್ರ, ಮುದ್ರಣ, ೧೯೯೯, ಪುಟ: ૩೨

૩. ಡಾ॥ ಎಲ್.ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್ ಪ್ರಕಾಶನ, ಮೈಸೂರು, ೨೦೧೨ ಪುಟ:೧೧೮

೪. ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ: ೧೨

೫. ಡಾ॥ ಎಸ್ ವಿದ್ಯಾಶಂಕರ, ಹಲಗೆಯಾರ್ಯನ ಶೂನ್ಯ ಸಂಪಾದನೆ, ಮುದ್ರಣ, ೧೯೯೮, ಪುಟ: ೪೭೬

೬. ಡಾ॥ ಕೇಶವಶರ್ಮ ಕೆ, ಸ್ತ್ರೀವಾದಿ ಆಖ್ಯಾನ. ಸಾರಾ ಎಂಟರ್ ಪ್ರೈಸಸ್ ಮುದ್ರಣ, ೨೦೦೫, ಪುಟ: ૩೦

## ೨ ದೇಹ ಮತ್ತು ಮನಸ್ಸು:-

ಸಮಾಜ ಹೆಣ್ಣನ್ನು ನೋಡುವುದು ಭೋಗದ ವಸ್ತುವಾಗಿಯೇ. ಹೆಣ್ಣಿನ ಶೋಷಣೆಗೆ ಅವರ ಆರ್ಥಿಕತೆ ಹಾಗೂ ಲೈಂಗಿಕತೆಗಳೆರೆಡನ್ನು ಆಕ್ರಮಿಸುವ ದುರಂತವೆಂದರೆ ಮಹಿಳೆಯರ ಮೇಲಿನ ಈ ಶೋಷಣೆಯೂ ಹೊಸದೇನಲ್ಲ. ಲೈಂಗಿಕ ಕಿರುಕುಳ ಹಿಂಸೆ ದೌರ್ಜನ್ಯಗಳು ಮೊದಲಿನಿಂದಲೂ ಇದ್ದೆ ಇದೆ. ಹಿಂಸೆ ದೌರ್ಜನ್ಯಗಳು ಬರಿ ಹೆಣ್ಣಿನ ಮೇಲೆ ನಡೆಯುತ್ತಿಲ್ಲ, ಅವಳ ದೇಹ ಮತ್ತು ಮನಸ್ಸಿನ ಮೇಲೂ ನಡೆಯುತ್ತಲಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಹೆಣ್ಣು, ದೇಹ, ಮನಸ್ಸು ಈ ಮೂರೂ ಬೇರೆ ಬೇರೆ ಅಂಶಗಳಾಗಿವೆ. ಹೆಣ್ಣಿನ ದೇಹಕ್ಕೆ ದೇಹಸೌಂದರ್ಯಕ್ಕೆ ಅತಿಯಾದ ಪ್ರಾಮುಖ್ಯತೆಯನ್ನು ಕೊಡುವ ಸಮಾಜವು ಅವಳ ಮಾನಸಿಕ ಸ್ಥಿತಿಯ ಬಗ್ಗೆ ಎಂದೂ ಯೋಚಿಸುವುದಿಲ್ಲ.

ಹೆಣ್ಣಿನ ಸ್ವಭಾವ ಕುರಿತು ವೈಜ್ಞಾನಿಕವಾಗಿ ಸಾಕಷ್ಟು ಸಂಶೋಧನೆಗಳು ನಡೆದಿವೆ. ಅವಳ ವರ್ತನೆ ಮತ್ತು ಸ್ವಭಾವಗಳು ಒಂದಕ್ಕೆ ಒಂದು ಹೊಂದಾಣಿಕೆ ಆಗುವುದಿಲ್ಲ. ಎಂಬ ಸತ್ಯವನ್ನು ಇತ್ತೀಚಿನ ಸಂಶೋಧನೆಗಳು ಧೃಡೀಕರಿಸಿವೆ. ನೊಮಿ ಮಿಸ್ಟನ್ ಎಂಬಾಕೆ ಅಮೆರಿಕದ ಹಲವು ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳಲ್ಲಿ ಮನಃಶಾಸ್ತ್ರದ ಪ್ರೋಫೆಸರಳಾಗಿ ಪ್ರತಿಭೆ, ಪ್ರಜ್ಞೆಗಳಂತಹ ಕ್ಷೇತ್ರಗಳಲ್ಲಿ ಸಂಶೋಧನೆಯಲ್ಲಿ ನಿರತಳಾಗಿದ್ದಳು. ಮನೋವಿಜ್ಞಾನದಲ್ಲಿ ತಜ್ಞಳೆನಿಸುತ್ತಾ ಹೋದಂತೆಲ್ಲಾ ಆಕೆಗೆ ಆ ಜ್ಞಾನಕ್ಷೇತ್ರವು ಈವರೆಗೆ ನಡೆಸಿರುವ ಹಲವು ಮುಖ್ಯ ಚಿಂತನೆಗಳು ಸಾಕ್ಷಾಧಾರಗಳೇ ಇಲ್ಲದ ಪೊಳ್ಳು ಭ್ರಮೆಗಳೆಂದು ಹೊಳೆಯತೊಡಗಿತು.

ಹೆಣ್ಣಿನ ದೇಹ ಸಂಬಂಧದಲ್ಲಿ ಮಂಡನೆಯಾಗುತ್ತಿರುವ ಹೊಸ ಚಿಂತನೆಗಳ ಹಿನ್ನೆಲೆಯಲ್ಲಿ ಭಾರತೀಯ ಪಾರಂಪರಿಕ ಗ್ರಹಿಕೆಗಳನ್ನು ಮರಳಿ ವಿವೇಚಿಸಬೇಕಾದ ಅವಶ್ಯಕತೆಯಿದೆ. ಮೊಲೆ ಮೂಡಿ ಬಂದರೆ ಹೆಣ್ಣೆಂಬರು, ಎಂಬ ಹೆಣ್ಣಿನ ದೇಹದ ಬಗ್ಗೆ ಚರ್ಚೆಗಳು ನಡೆದಿವೆ. ಅದರಲ್ಲೂ ವ್ಯಕ್ತಿಯ ವರ್ತನೆಗಳನ್ನು ಅಧ್ಯಯನ ಮಾಡುವ ಮೂಲಕ ಆ ವ್ಯಕ್ತಿಯ ಮೂಲ ಸ್ವಭಾವಗಳನ್ನು ಗ್ರಹಿಸಬಹುದು ಎಂಬ ಚಿಂತನೆಯಂತೂ ಅದೆಷ್ಟು ಭ್ರಮಾತ್ಮಕವಾದುದು ಎಂಬುದರ ಅರಿವಿನೊಂದಿಗೆ ಈ ಚಿಂತನೆಯು ಹೆಣ್ಣಿಗೆ ಮಾಡಿರುವ ತೀವ್ರ ಅನ್ಯಾಯವು ಸ್ಪಷ್ಟವಾಗಿ ಕಾಣತೊಡಗಿತು. ಇದರಿಂದ ಹೊರಗೆ ಬರಲು ಯತ್ನಿಸಿದವರು ಅಕ್ಕಮಹಾದೇವಿ. ಸಂಸಾರದ ಒಳಗೆ ತನ್ನ ಭಕ್ತಿ ಕೈಂಕರ್ಯವನ್ನು ಹೆಳವನಕಟ್ಟೆ ಗಿರಿಯಮ್ಮಳು ಮುಂದುವರೆಸುತ್ತಾ ಹೋಗುತ್ತಾಳೆ, ಹೆಣ್ತನಕ್ಕೆ ಮಾದರಿಯಾಗಿ ಜೀವಿಸಿದವರು ಎನ್ನಲಾಗಿದೆ

**Can Wisdom be put in Silver rod?**
**Or love in Golden Bowl**

**Wiliam Blake**

ಬ್ಲೇಕನ ಎರಡು ಸಾಲುಗಳು, ಲೈಂಗಿಕ ಪ್ರತಿಮೆಗಳ ಮೂಲಕ ವ್ಯಕ್ತಿತ್ವದಲ್ಲಿ ಉಂಟಾದ ಛಿದ್ರತೆಯೊಂದನ್ನು ಸೂಚಿಸುತ್ತಿವೆ. ಜ್ಞಾನ ಮತ್ತು ಪ್ರೇಮದ ಆಶಯಗಳು ಕಾಮ ಪಾತಾಳಿಗೆ ಸೇರಿ ಹೋಗುವುದನ್ನು ಪ್ರತ್ಯೇಕ ಗೊಳ್ಳುವುದನ್ನು ಬ್ಲೇಕ್ ವಿರೋಧಿಸುತ್ತಾನೆ.[೧] ಪ್ರಕೃತಿ ಮತ್ತು ಪ್ರೇಮಗಳ ಶೋಧನೆಯ ಮೂಲಕ ಅನುಭಾವದ ಆಶಯಗಳನ್ನು ಕಾಣಲು ತಹತಹಿಸಿದ ಬ್ಲೇಕನ ಧೋರಣೆಗಳು ನಿಶ್ಚಯವಾಗಿ ಕಾಮುಕ ಪ್ರವೃತ್ತಿಗಳನ್ನು ಅಲ್ಲಗಳೆಯುತ್ತವೆ.

ಮಾನವ ಅಸ್ಥಿತ್ವದ ಸ್ವರೂಪವನ್ನು ಗ್ರಹಿಸುವ ಅಕ್ಕಮಹಾದೇವಿಯ ಧೋರಣೆಗಳು ಇಂತದ್ದೇ ನೆಲೆಯಿಂದ ಪ್ರಾರಂಭವಾಗುತ್ತವೆ ಎನ್ನುವುದನ್ನು ಗಮನಿಸಬೇಕು. ವೈಯಕ್ತಿಕವಾದ ಗಾಢ, ಆತಂಕ ಮತ್ತು

ಹಂಬಲಗಳ ದಾಟಿಯಲ್ಲಿ ಪ್ರಕಟಗೊಳ್ಳುವ ಇವಳ ವಚನಗಳು ಪ್ರೇಮದ ಮತ್ತು ಸುಂದರವಾದ ವಾತಾವರಣದಲ್ಲಿ ತನ್ನ ಅಸ್ಥಿತ್ವವನ್ನು ನೆಲೆಗೊಳಿಸಬೇಕೆಂಬ ಆಶಯವನ್ನು ಪ್ರಕಟಿಸುತ್ತದೆ.

ಅಕ್ಕನ ವಚನಗಳಲ್ಲಿ ಅವಳ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಪ್ರಮುಖ ದ್ವಂದ್ವವೊಂದು ದೇಹ ಮತ್ತು ಮನಸುಗಳ ಛಿದ್ರಗೊಂಡ ಸ್ಥಿತಿಯನ್ನು ವಿವರಿಸುವುದರಿಂದ ಪ್ರಾರಂಭವಾಗುತ್ತದೆ ಎನ್ನಬಹುದು. ಈ ಛಿದ್ರಗೊಂಡ ಸ್ಥಿತಿಯು ಅವಳ ಸಂದಂರ್ಭದಲ್ಲಿ ಅತ್ಯಂತ ವಿಶಿಷ್ಟವಾಗಿರುವುದನ್ನು ಗಮನಿಸಬಹುದು.

ಅಕ್ಕಮಹಾದೇವಿಯ ದಾಂಪತ್ಯ ಜೀವನದ ಸಂದರ್ಭಗಳಿಂದಲೇ ಈ ಸಂಘರ್ಷವೊಂದು ಇವಳ ಜೀವನದಲ್ಲಿ ಆರಂಭವಾಗಿತ್ತೆಂದು ಊಹಿಸಲು ಸಾಕಷ್ಟು ಆಧಾರಗಳಿವೆ. ಅಕ್ಕಮಹಾದೇವಿಯು ಕೌಶಿಕನನ್ನು ಮದುವೆಯಾಗಿದ್ದಳೆ ಇಲ್ಲವೇ ಎನ್ನುವ ಚರ್ಚೆಯನ್ನು ಇಲ್ಲಿ ನಾನು ಎತ್ತಲು ಹೋಗುವುದಿಲ್ಲ. ಆದರೆ ಕೌಶಿಕರಾಜನೊಡನೆ ಅಕ್ಕಮಹಾದೇವಿಯು ಕೆಲವು ದಿನವಾದರೂ ಜೊತೆಗಿದ್ದು ಕೌಶಿಕನು ತನ್ನ ಅಭಿಪ್ರಾಯದಂತೆ ನಡೆಯದಿರಲು ಅವನನ್ನು ಬಿಟ್ಟು ಹೋದಳೆಂದು ಘಟನೆಯನ್ನು ಗುರ್ತಿಸಲಾಗಿದೆ. ಎರಡು ವರ್ಗಗಳ ಕಾವ್ಯದೊಳಕ್ಕೆ ಇಳಿದು ಪರೀಕ್ಷಿಸಿದರೆ ಒಂದು ಗಮನಾರ್ಹ ಸಂಗತಿ ಕಂಡು ಬರುತ್ತದೆ. ಅಕ್ಕಮಹಾದೇವಿ ಕೌಶಿಕನ್ನು ಏಕೆ ಬಿಟ್ಟಲು ಎನ್ನುವ ಸಂಗಂತಿಯನ್ನು ತಿಳಿಸುವಾಗ ಇವುಗಳು ಹೆಚ್ಚುಕಡಿಮೆ ಒಂದೇ ನಿಲುವನ್ನು ತಾಳುತ್ತವೆ ಎಂದು ಹೇಳಬಹುದು. ಇದಕ್ಕೆ ನಿದರ್ಶನವಾಗಿ ಎರಡು ಮುಖ್ಯ ಕಾವ್ಯಗಳ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬಹುದು.

ಹರಿಹರನ ಉಡುತಡಿಯ ಅಕ್ಕಮಹಾದೇವಿಯ ರಗಳೆಯಲ್ಲಿ ಅಕ್ಕಮಹಾದೇವಿಯು ತನ್ನ ಮದುವೆಗೆ ಹಾಕುವ ಶರತ್ತುಗಳು ಈಗಿವೆ.

ಎನ್ನಿಚ್ಚೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ
ಎನ್ನಿಚ್ಚೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ
ಎನ್ನಿಚ್ಚೆಯೊಳು ಗುರುವಿನಂಘ್ರಿ ಸೇವೆಯೊಳಿಪ್ಪ
ಎನ್ನಿಚ್ಚೆಯೊಳು ನಿಮ್ಮ ನೃಪನ ಸಂಗದೊಳಿಪ್ಪೆ
ಇಲ್ಲಿ ಮೂರುಂ ತಪ್ಪನೆ ಸೈರಿಸುವೆನೆಂದು
ಅಲ್ಲಿಂದ ಬಳಿಕ ಬಲಿದಂತಿಪ್ಪೆ ನಾನುಳಿದು[3]

ಕೌಶಿಕನು ತನ್ನ ಕಾಮಾತುರತೆ, ಹೆಣ್ಣಿನ ಮೇಲಿನ ಪ್ರಭುತ್ವದ ದರ್ಪ ಹಾಗೂ ಶಿವ ಭಕ್ತಿಯ ತಿರಸ್ಕಾರ ಈ ಕಾರಣಗಳಿಂದಾಗಿ ಮಹಾದೇವಿಗೆ ಕೊಟ್ಟ ಶರತ್ತುಗಳನ್ನು ಮೀರುತ್ತಾನೆ. ಮಹಾದೇವಿ ಅವನನ್ನು ಬಿಟ್ಟು ಹೊರಡುತ್ತಾಳೆ. ಎನ್ನಿಚ್ಚೆಯೊಳು ಕಾರ್ಯವನ್ನು ಮಾಡಬೇಕೆನ್ನುವ ಇವಳ ಆಕಾಂಕ್ಷೆಗಳೇ ಇಲ್ಲಿ ವಿಫಲವಾಗುತ್ತವೆ.

ಅಕ್ಕಮಹಾದೇವಿಯು ಮದುವೆಯಾಗಲಿಲ್ಲವೆಂದು ಹೇಳುವ ಗುಂಪಿಗೆ ಸೇರುವ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಕೌಶಿಕನು ಅಕ್ಕಮಹಾದೇವಿಯ ಬಯಕೆಗಳನ್ನು ತೀರಿಸುವುದಾಗಿಯೂ ಅವಳ ಒಪ್ಪಿಗೆ ಇಲ್ಲದೆ ಯಾವ ಬಲತ್ಕಾರವನ್ನು ಮಾಡುವುದಿಲ್ಲವೆಂದು ತಿಳಿಸಿ ಅರಮನೆಗೆ ಕರೆದೊಯ್ಯುತ್ತಾನೆ. ಕೌಶಿಕನು ಒಂದು ದಿನದ ಕಾಮದ ಉನ್ಮಾದದಿಂದ ಮಹಾದೇವಿಯನ್ನು ಆಲಂಘಿಸಲೆಂದು ಹೋದಾಗ ಅವಳು ನೀನು ಶಿವಭಕ್ತನಾದೊಡೆ ನಿನ್ನನ್ನು ಕೂಡುವೆನು, ಎಂದು ಹೇಳುವಳು ಅದಕ್ಕೆ ಅವನು

ಒಪ್ಪದಿರಲು ನಿಮ್ಮಯ ಸಂಗವಳವೊಡದು ಎಂದು ಹೇಳಿ ದಿಗಂಬರಳಾಗಿ ಅವನನ್ನು ಬಿಟ್ಟು ಹೊರಡುತ್ತಾಳೆ.

ಎರಡು ಕಾವ್ಯಗಳಲ್ಲಿಯೂ ಸನ್ನಿವೇಶದ ವಿವರಗಳು ಬೇರೆಯಾದರು ಅಕ್ಕಮಹಾದೇವಿ ಕೌಶಿಕನಿಗೆ ಪ್ರತಿನಾಯಕಿಯಾಗಿಯೇ ಉದ್ದಕ್ಕೂ ರೂಪುಗೊಳ್ಳುತ್ತಾಳೆ. ಇವರಿಬ್ಬರ ದ್ವಂದ್ವವೊಂದರಲ್ಲಿ ಅಕ್ಕಮಹಾದೇವಿಯು ಕೌಶಿಕನನ್ನು ತಿರಸ್ಕರಿಸುವ ಕ್ರಿಯೆಯಿಂದ ಕೌಶಿಕನಿಗಿಂತ ಒಂದು ಕೈ ಮೇಲೆನಿಸುತ್ತಾಳೆ. ಹೆಣ್ಣನ್ನು ಕಾಮದ ವಸ್ತುವೆಂದು ನೋಡುವ ಕೌಶಿಕನ ಆಲೋಚನೆಗಳು ಈ ಕಾವ್ಯದಲ್ಲಿ ಒಂದಕ್ಕೊಂದು ಮುಖಾಮುಖಿಯಾಗಿವೆ. ಶಿವಭಕ್ತಿ ಪಾರಮ್ಯವು ಇಲ್ಲಿ ಅಂತಿಮ ಜಯವನ್ನು ಹೊಂದಿದಾಗೆ ಕಾವ್ಯಗಳ ಚಿತ್ರಣವಿದೆ. ಕಾವ್ಯದಲ್ಲಿ ಕವಿಯ ಧೋರಣೆಗಳು ಏನೇ ಇದ್ದರೂ ಕೌಶಿಕ ಅಕ್ಕಮಹಾದೇವಿಯವರ ಸಂಬಂಧದ ಘಟನೆಯಲ್ಲಿ ಎರಡು ಸಾಧ್ಯತೆಗಳು ಕಾವ್ಯದ ರಚನೆಯಲ್ಲಿ ರೂಪುಗೊಳ್ಳುತ್ತವೆ. ಕೌಶಿಕನ ಕಾಮುಕತೆ ಮತ್ತು ಅಧಿಕಾರ ದರ್ಪ ಇವುಗಳಿಂದ ಹೆಣ್ಣು ಕೇವಲ ಭೋಗ ವಸ್ತುವಾಗಿ ಗೋಚರವಾಗಿದ್ದಾಳೆ. ತನ್ನ ವ್ಯಕ್ತಿತ್ವವನ್ನು ಅಧೀನ ಮಾಡಲ್ಲೊಲ್ಲದ ಅಕ್ಕಮಹಾದೇವಿ ಕೌಶಿಕನನ್ನು ಬಿಟ್ಟು ಹೋಗುವ ಪ್ರಸಂಗವು ಬರುತ್ತದೆ.

ಅಕ್ಕಮಹಾದೇವಿಯ ವಚನಗಳಲ್ಲಿ ಕಾಮದ ವಿಕಾರ ನೆಲೆಗಳೇ ನಿರಾಕರಣೆಯು ಹೆಣ್ಣಿನ ಮೇಲೆ ಗಂಡಿನ ದೈಹಿಕ ಪ್ರಭುತ್ವದ ನಿರಾಕರಣೆಯನ್ನೆ ಸ್ಪಷ್ಟವಾಗಿ ಸೂಚಿಸುತ್ತದೆ. ವೈಯಕ್ತಿಕವಾಗಿ ಇವಳು ಗಂಡಿನ ಈ ಪ್ರಭುತ್ವವನ್ನು ಎರಡು ನೆಲೆಗಳಲ್ಲಿ ತಿರಸ್ಕರಿಸುತ್ತಾಳೆ. ಒಂದನೆಯ ನೆಲೆಯಲ್ಲಿ ಈ ಪ್ರಭುತ್ವಕ್ಕೆ ಆಕರ್ಷಣೆಗೆ ಕಾರಣವಾದ ದೇಹ ಅಥವಾ ಒಡಲನ್ನೇ ನಿರಾಕರಿಸುತ್ತಾಳೆ. ಎರಡನೇ ನೆಲೆಯಲ್ಲಿ ಕೂಡುವ ಬಯಕೆಯನ್ನು ಜಗದ ಗಂಡನಲ್ಲದ ಮಲ್ಲಿಕಾರ್ಜುನನಿಗೆ ಸಮರ್ಪಿತವೆನ್ನುವ ಆಶಯದಲ್ಲಿಯೂ ದೇಹವನ್ನು ಉಪಯೋಗಿಸುವ ಲೌಕಿಕದ ಲಾಭದಾಯಕ ಕಾಮುಕ ಪ್ರವೃತ್ತಿಯನ್ನು ನಿರಾಕರಿಸುತ್ತಾಳೆ. ಇವೆರಡು ನೆಲೆಗಳು ಒಂದರ ಪರಿಣಾವೇ ಇನ್ನೊಂದು ಆಗಿದೆ. ಆದ್ದರಿಂದಲೇ ಇಲ್ಲಿ ದೇಹದ ಉಪಯೋಗದ ವಿವರವೂ ಎರಡು ವಾತಾವರಣಗಳಲ್ಲಿ ಎರಡು ಬಗೆಗಳಲ್ಲಿ ರೂಪುಗೊಳ್ಳುತ್ತದೆ. ಈ ಎರಡು ನೆಲೆಗಳು ದೇಹವು ಬಳಕೆಯಾಗಬಹುದಾದ ಮೌಲ್ಯಾತ್ಮಕ ಆವರಣವನ್ನು ಅಪೇಕ್ಷಿಸಿಯೇ ಬೆಳೆದು ಬಂದಿದೆ.

ಅಕ್ಕಮಹಾದೇವಿ ವಚನಗಳಲ್ಲಿ ಲೌಕಿಕವು ದೇಹವನ್ನು ನೋಡುವ ಪರಿಗಣಿಸುವ ದೃಷ್ಟಿಯೇ ಕಾರಣವಾಗಿ ದೇಹ ಮತ್ತು ಮನಸ್ಸುಗಳಲ್ಲಿ ಉಂಟಾದ ಕಂದರದ ಸ್ವರೂಪವನ್ನ ಕುರಿತು ವಿವರಣೆಯನ್ನು ಹಿಂದೆ ನೋಡಿದ್ದೇವೆ. ಚೆನ್ನಮಲ್ಲಿಕಾರ್ಜುನನ ಸಂಬಂಧವೊಂದರಲ್ಲಿ ಅಕ್ಕಮಹಾದೇವಿಯು ತನ್ನ ದೇಹ ಹಾಗೂ ಮನಸ್ಥಿತಿಯ ಬಯಕೆಯನ್ನು ಇನ್ನೊಂದು ರೀತಿಯಲ್ಲಿ ಪ್ರಕಟಿಸುತ್ತಾಳೆ. ಈ ಹಂತದಲ್ಲಿ ಒಬ್ಬ ಭಕ್ತಳಿಗೆ ಒದಗುವ ಅನುಭಾವದ ಕೆಲವು ಸಮಸ್ಯೆಗಳು ಇವಳನ್ನು ಅತ್ಯಂತ ತೀವ್ರಗತಿಯಲ್ಲಿ ಕಾಡಿವೆ. ದೇವನೊಡನೆ ತನ್ನ ಸಂಬಂಧವು ಐಂದ್ರಯಿಕ ಲಕ್ಷಣಗಳನ್ನು ಹೊಂದಿರುತ್ತದೆಯೇ ಇಲ್ಲವೇ ಎನ್ನುವ ದ್ವಂದ್ವ ಈ ವಿಭಾಗದ ವಚನಗಳ ಮುಖ್ಯ ನೆಲೆಯಾಗಿದೆ.

ಶಿವ ಶರಣರಂತೆ ಹರಿದಾಸರಿಗೂ ಧರ್ಮ ಪ್ರಚಾರ ಮುಖ್ಯ ಉದ್ದೇಶವಾದರೂ ತಮ್ಮ ಭಕ್ತಿ ಸಾಧನಯೇ ಪರಮ ಉದ್ದೇಶವಾಗಿತ್ತು. ಲೌಕಿಕ ಭೋಗದಲ್ಲಿ ನಿರಾಸಕ್ತಿ, ಸಂಸಾರದ ನಿಸ್ಸಾರತೆಯ ಅರಿವು, ಭಕ್ತಿಯ ತೀವ್ರತೆ ಪ್ರಮುಖ ಪಂಥಗಳಲ್ಲಿ ಕಾಣಿಸಿತು, ಅದು ಪ್ರಮುಖವಾಗಿ ಶೈವರಿಗೆ ಶಿವೊತ್ತಮ್ಮೆಯನ್ನು ಹೇಳಿದಂತೆ ಹರಿದಾಸರಿಗೆ ಹರಿ ಸರ್ವೋತ್ತಮೆಯನ್ನು ಸಾರಿದರು. ಈ ಎರಡು ಸಾಹಿತ್ಯ ಪ್ರಕಾರಗಳಿಗೆ ಉಪನಿಷತ್ತು ಆಧಾರವಾಗಿದೆ. ಭಕ್ತಿಯ ನೈವೇದ್ಯದ ಅರಿವು ಬರಲು ತಮ್ಮ ಮನಸ್ಸಿನ ಮೇಲೆ ಮುಕ್ತ

ಹಿಡಿತದ ವೈಫಲ್ಯ ಮತ್ತು ಛಿದ್ರಗೊಂಡ ಮನಸ್ಸು ಕಾರಣವಾಗಿರಬಹುದು. ಅದು ೧೮ನೇ ಶತಮಾನದಲ್ಲಿ ಗಿರಿಯಮ್ಮಳ ಮೇಲೆ ಪ್ರಮುಖವಾಗಿ ಪ್ರಭಾವಿತಗೊಂಡಿದೆ.

ಹೆಳವನಕಟ್ಟೆ ಗಿರಿಯಮ್ಮಳು ತಾನು ಎಳವೆಯಲ್ಲಿದ್ದಾಗಲೇ ತನ್ನ ತವರು ಮನೆಯ ದೈವವಾದ ಮೈಲಾರಲಿಂಗನನ್ನು ಪೂಜಿಸುತ್ತಿದ್ದಳು. ನಂತರ ಬೆಳೆಯುತ್ತಾ ವಿಷ್ಣುವಿನ ಮೇಲೆ ತನ್ನ ಮನಸ್ಸನ್ನು ಮತ್ತು ಭಕ್ತಿಯ ತೀವ್ರತೆಯು ಹರಿಯ ಕಡೆ ಹರಿಯಿತು. ಇದರಿಂದ ತಿಳಿಯುವುದಾದರೂ ಅದು ಸತ್ಯವೆಂದು ನಾವು ಮನಗಾಣಲು ಸಾಧ್ಯವಿಲ್ಲ, ತನ್ನ ಮುತ್ತಲಿನ ಪರಿಸರ ಅಥವಾ ತನ್ನ ಮನಸ್ಸಿನ ವಿರುದ್ಧದ ಭಾವನೆಗಳು ಇರಬಹುದು. ಪ್ರಬುದ್ಧತೆ ಸಾಧಿಸಿದಂತೆ ಮನಸ್ಸು ಬದಲಾಗುತ್ತಾ ಇರುವುದನ್ನು ಕಾಣಬಹುದು.

ಉಡುವ ಸೀರೆಯ ಸೆಳೆದೋಡುವ ದೊಡ್ಡ
ಕಡಹದ ಮರವೇರಿ ನೋಡುವ
ಕೊಡಲೊಲ್ಲದೆ ಬಹು ಕಾಡುವ ಲಜ್ಜೆ
ಗೆಡಿಸಿ ಮಾನಿನಿಯರ ಕೂಡುವ ತಪವ್ಯಾತಕೆ
ಸಖಿ ತವಕದಿಂದಲಿ ಪೋಗಿ ಎ
ನ್ನೊಡೆಯನ ಕರತಾರೆ ಅಡಿಗೆರಗುವೆನಾ[3]

ಗಿರಿಯಮ್ಮ ಮನಸ್ಸಿನ ವಿರಹದ ಭಕ್ತಿಯ ತೀವ್ರತೆಯನ್ನು ಈ ಕೀರ್ತನೆಯಲ್ಲಿ ವ್ಯಕ್ತವಾಗಿದೆ.

ಹರಿಯನ್ನು ಕುರಿತು ಗಿರಿಯಮ್ಮಳು ತಾನು ಅಪ್ಪ-ಅಮ್ಮನನ್ನು ಕಳೆದುಕೊಂಡು ತನ್ನ ಗಂಡನ ಬಿಟ್ಟು ನನಗೆ ಯಾರು ಇಲ್ಲದ್ದಾಗಿದ್ದೇನೆ. ತನ್ನ ಕೊನೆಯ ಕಾಲದವರೆಗೆ ನನ್ನ ಕೈ ಬಿಡಬೇಡ ಎಂದು ತನ್ನ ಒಡೆಯನನ್ನು ಬೇಡುವ ಸ್ಥಿತಿಯನ್ನು ನೋಡಬಹುದು.

ಹೆಣ್ಣು ದೇಹದ ಕುರಿತ ಚರ್ಚೆಗಳು ಇದುವರೆಗೂ ನಡೆದಿವೆ. ಈಗ ಮನಸ್ಸಿನ ಕುರಿತ ಚರ್ಚೆ ಮಾಡಬೇಕಾಗಿದೆ. ಮೊದಲು ಮನಸ್ಸನ್ನು ಕುರಿತು ವೈಜ್ಞಾನಿಕ ಅಂಶಗಳು ಏನಾದರೂ ಇವೆಯೇ ಎಂದು ನೋಡಬೇಕಾಗುತ್ತದೆ. ಮನೋ ವಿಜ್ಞಾನಿ ಸಿಂಗ್ಮಂಡ್ ಫ್ರಾಯ್ಡ್‌ನ ವಿಚಾರಗಳು ಭ್ರಮಾತ್ಮಕವಾಗಿದೆ ಎಂದು ಇತ್ತೀಚಿನ ಸಂಶೋಧನೆಗಳು ದೃಢೀಕರಿಸಿವೆ. ವೈಜ್ಞಾನಿಕ ಹೆಸರಿನಲ್ಲಿ ನಡೆಯುವ ಸಂಶೋಧನೆಗಳು ಅನುಸರಿಸುವ ವಿಧಿ ವಿಧಿವಿಧಾನಗಳೇ ದೋಷಪೂರಿತವಾಗಿವೆ. ಹಾಗೆ ವೈಜ್ಞಾನಿಕವಾದುದ್ದೇನು ಇವುಗಳ ಹಿನ್ನೆಲೆಗಿಲ್ಲ. ಫ್ರಾಯ್ಡ್ ಮತ್ತು ನಂತರದ ಅವನ ನಿಷ್ಠ ಅನುಯಾಯಿಗಳೆಲ್ಲರೂ ಮನೋರೋಗಿಳ ಪರಿಶೀಲನೆ ಮತ್ತು ಚಿಕಿತ್ಸೆಗಳಲ್ಲಿ ತೊಡಗಿದ್ದ ಡಾಕ್ಟರುಗಳು ಮನೋ ವೈಕಲ್ಪಗಳಿಂದ ಬಳಲುವ ಅಸಂಖ್ಯ ರೋಗಿಗಳೊಂದಿಗಿನ ದಶಕಗಳ ದೀರ್ಘ ಅನುಭವದಿಂದಾಗಿ ತಮಗೆ ಮನುಷ್ಯನ ಮನಸನ್ನು ಅರಿಯುವ ಅರ್ಹತೆ ಉಂಟಾಗಿದೆ ಎಂಬ ಭ್ರಮೆಗೆ ಒಳಗಾಗಿದ್ದ ಈ ಡಾಕ್ಟರುಗಳು ತಮ್ಮ ಡಾಕ್ಟರಿಕೆಯ ಅನುಭವವನ್ನೆ ಸಂಶೋಧನಾ ಮಾಹಿತಿಯನ್ನಾಗಿ ಬಳಸಿದರು. ಮನಸ್ಸನ್ನು ಕುರಿತ ವಿಚಾರಗಳು ಹೀಗೆ ಎಂದು ಅಷ್ಟು ಸುಲಭವಾಗಿ ಹೇಳಲು ಸಾಧ್ಯವಿಲ್ಲ. ಇದುವರೆವಿಗೂ ನಾವು ಹೆಣ್ಣು ಬೇರೆ, ದೇಹ ಬೇರೆ ಎಂದು ಚರ್ಚಿಸಿದ್ದೇವೆ. ಹಾಗೆಯೇ ಅವಳ ಮನಸು ಸಹ ಬೇರೆಯಾಗಿರುತ್ತದೆ. ಪುರುಷನ ಮುಂದೆ ಸ್ತ್ರೀ ಮಾಯೆ

ಎಂದು ಹೇಳುತ್ತಾಳೆ. ಹೀಗೆ ಹೇಳುವಾಗ ಸ್ತ್ರೀ ಪುರುಷ ಮಾಯೆಯಾಗಿ ಪುರುಷನಿಗೆ ಸ್ತ್ರೀ ಮಾಯೆಯಾಗಿ ಕಾಡುವ ವಿಚಾರಗಳನ್ನು ಅಕ್ಕ ಸ್ತ್ರೀ ದೃಷ್ಟಿಕೋನದಲ್ಲಿ ಮೊದಲಿಗೆ ವಿವೇಚಿಸಿರುವುದು ಮತ್ತು ಸ್ತ್ರೀ ಭಾಷೆಯೊಂದನ್ನು ಜೊತೆಗೆ ಸ್ತ್ರೀ ಆಲೋಚನೆಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. ತಾತ್ವಿಕವಾದ ಕೆಲವು ವಿಚಾರಗಳಲ್ಲಿ ಶಿವ ಶರಣ ಯುಗದ ಚಿಂತನೆಗೆ ಸ್ತ್ರೀಯ ನೆಲೆಯಿಂದ ಕೆಲವಾದರೂ ಹೊಸ ಅಂಶಗಳನ್ನು ಒದಗಿಸಿಕೊಟ್ಟಾಕೆ ಅಕ್ಕ ಎನ್ನಬಹುದು.

**ಮನದ ಚಿಂತೆಯ ಬಿಡಿಸೊ ಮಾದವ ಮುಕುಂದ ಹರಿ** ಎಂದು ಗಿರಿಯಮ್ಮ ತನ್ನ ದೇವರಾದ ವಿಷ್ಣುವನ್ನು ಪ್ರಾರ್ಥಿಸುತ್ತಿದ್ದಾಳೆ. **ಯಾಕೆ ಬಾರನಕ್ಕಯ್ಯ ಎನ್ನೆಯ ಪ್ರಾಣನಾಥನ ಕರೆತಾರೆ ಸೈರಿಸಲಾರೆ** ತನ್ನ ಪ್ರಾಣನಾತನ ಅಗಲಿಕೆಯಿಂದ ಅವಳ ಮನಸು ತೀವ್ರ ಆಘಾತವಾಗಿದ್ದು ಅವನನ್ನು ಕರೆತಂದು ತೋರಿಸು ಎಂದು ತನ್ನ ಸಖಿಯನ್ನು ಕೇಳಿಕೊಳ್ಳುತ್ತಿದ್ದಾಳೆ ದೇಹ ಮತ್ತು ಮನಸಿನ ನಡುವಿನ ಹಲವುಗೊಂದಲಗಳು ತುಮುಲಗೊಳು ಭಕ್ತಿ ಸಾಹಿತ್ಯದ ಮೂಲಕ ಮೂಡುತ್ತದೆ.

ಕಂಡೇನೀಗ ರಂಗನಾಥನ ನನ್ನ ಮೊರೆಯ ಹೊಕ್ಕೆ ಕಾಯೊ ಎನ್ನ ಎಂಬ ಹಾಡಿನಲ್ಲಿ ಭಕ್ತಿಯ ಜೊತೆಗೆ ದೈನ್ಯತೆಯು ಸೇರಿದೆ. ಭವದ ಕೋಟಲೆಗಳಿಂದ ನೊಂದು ತನ್ನನ್ನು ಸಲಹು, ಎಂದು ದೇವರಲ್ಲಿ ಆಕೆ ಮೊರೆಯಿಟ್ಟ ಪರಿಯೇ ಅನೇಕ ಹಾಡುಗಳ ರೂಪದಲ್ಲಿ ನಿಂತಿದೆ. **ತಾರಮ್ಮ ಶ್ರೀ ರಂಗಧಾಮನ ತಂದು ತೋರಮ್ಮ,** ಎಂದು ಒಂದು ಕಡೆ ಹೇಳಿದರೆ, ಮತ್ತೊಂದು ಭಾಗದಲ್ಲಿ **ಇಂಥವಗ್ಯಾಕೆ ಮನಸ್ಸೋತೆ** ಎಂದು ಹೇಳುವುದನ್ನು ಗಮನಿಸಬಹುದು. ಇದು ಅವಳ ಮನಸ್ಸಿನ ದುರ್ಬಲತೆ ಎಂದು ಹೇಳಲಾಗದಿದ್ದರೂ ಸ್ಥಿರ ದ್ವಂದ್ವವನ್ನು ಹೊಂದಿರುವುದನ್ನು ತೋರ್ಪಡಿಸುತ್ತದೆ. ಅಲ್ಲದೇ ಮೈಲಾರಲಿಂಗ, ಹೆಳವನಕಟ್ಟೆ ರಂಗಯ್ಯ, ಕೊಕ್ಕನೂರಿನ ಹನುಮಂತನ ಸ್ಮರಣೆ ರಾಣಿಬೆನ್ನೂರು ಬಯಾಲಾಂಜಯ್ಯನ ಸ್ತುತಿ, ರಾಮನ ಬಂಟ ಹನುಮನ ಬಗ್ಗೆ ಗಿರಿಯಮ್ಮನಿಗೆ ವಿಶೇಷ ಪ್ರೀತ್ಯಾದರಗಳು ಇರುವುದನ್ನು ಈ ಹಾಡುಗಳಲ್ಲಿ ಕಾಣಬಹುದಾಗಿದೆ. ಇದರ ಸಲುವಾಗಿಯೇ ಸೀತಾಕಲ್ಯಾಣ ಲವಕುಶರ ಕಾಳಗ ಬರೆದಂತೆಯು ಕಾಣುತ್ತದೆ.

ಉದ್ದಾಳಿಕನ ಕಥೆಯಲ್ಲಿ ಉದ್ದಾಳಿಕನಿಗೆ ತನ್ನ ಮದುವೆಯ ಬಗ್ಗೆಯೇ ಚಿಂತೆ. ಜರೆ ಅಪರಿ ನೆರೆಪರಿಗಳು ಬಂದವು ಸಡಲಿದವು ದಂತಪಂಕ್ತಿ ಕೊಡುವರಾರು ಕರ್ನಿಕೆ....... ಎಂದು ಕೇಳುತ್ತಾನೆ. ಆಗ ಬ್ರಹ್ಮ ....ಉತ್ತಮ ರಘುಕುಲ ರಘುರಾಯನಾತ್ಮಜೆ ಇಪ್ಪಳು ಕರ್ನಿಕೆಯಾಗಿ ಪುತ್ರ ಹುಟ್ಟಿದ ಏಳು ವರ್ಷಕ್ಕೆ ಪತ್ನಿಯು ದೃಷ್ಟಿ ಗೋಚರಕೆ ಬೀಳುವಳು. ಎಂದು ಕನ್ಯೆ ಯಾರೆಂಬುದರ ಜೊತೆಗೆ ಹೊಳೆಗೆ ಹೋದ ಚಂದ್ರವತಿ ಉದ್ದಾಳಿಕನ ಮುನಿ ತೇಲಿಬಿಟ್ಟ ಕಮಲದ ಹೂವನ್ನು ವಿಧಿವಶದಿಂದ ಅಘ್ರಾಣಿಸುತ್ತಾಳೆ. ಅವಳಿಗೂ ತಿಳಿಯದೆ ಗರ್ಭ ಧರಿಸುತ್ತಾಳೆ. ಹೆತ್ತವರು ಮರ್ಯಾದೆಗೆ ಅಂಜಿ ಗರ್ಭಿಣಿಯಾದ ಅವಿವಾಹಿತ ಮಗಳನ್ನು ಕಾಡಿಗೆ ಅಟ್ಟುತ್ತಾರೆ. ಕಾಡಿನಲ್ಲಿ ಒಂಟಿಯಾಗಿದ್ದ ಅವಳನ್ನು ಮುನಿಯೊಬ್ಬ ಕಂಡು ತನ್ನಾಶ್ರಮಕ್ಕೆ ಕರೆದೊಯ್ಯುತ್ತಾನೆ. ದಿನ ತುಂಬಿದ ನಂತರ ಮೂಗಿನಿಂದ ಗಂಡು ಮಗುವೊಂದು ಹುಟ್ಟುತ್ತದೆ. ತಂದೆ ಇಲ್ಲದ ಮಗುವನ್ನು ಸಾಕಲಾರದೆ ಚಂದ್ರವತಿ ಮಗುವನ್ನು ನೀರಿನಲ್ಲಿ ತೇಲಿಬಿಡುತ್ತಾಳೆ. ತೇಲಿ ಬಂದ ಮಗು ಉದ್ದಾಳಿಕನಿಗೆ ಸಿಗುತ್ತದೆ. ತೇಲಿಬಂದ ಮಗುವಿನ ಚಿತ್ರ ಒಂದೇ ನುಡಿಯಲ್ಲಿ ಚೊಕ್ಕವಾಗಿ ಬಂದಿದೆ.

ಸಣ್ಣ ಬೆರಳು ತನ್ನ ಬಾಯೊಳಗಿರಿಸಿದ ಕಣ್ಣುಮುಚ್ಚುತ ತೆರವುತಲೆ
ಪೊನ್ನಪುತ್ಥಲಿಯಂತೆ ಥಳಥಳಿಸುವ ಪುಟ್ಟ ಚಿಣ್ಣನ ತೊಟ್ಟಲ ಕಂಡೆ[೪]

ವಿಧಿಲಿಖಿತದಂತೆ ೭ ವರ್ಷದ ನಂತರ ಉದ್ದಾಳಿಕನ ಚಂದ್ರವತಿ ಒಂದಾಗುತ್ತಾರೆ.

ಶಂಕರಗಂಡನ ಹಾಡಿನಲ್ಲಿ ಬಾವ ಮೈದುನರ ಕಥೆಯನ್ನು ಹೇಳಲಾಗಿದೆ. ಶಂಕರಗಂಡನ ತಂಗಿ ರತಿ ವಯಸ್ಕಳಾದಾಗ ಮನ್ಮಥನು ವಿವಾಹವಾಗಲು ಶಿವನ ಅಭಿಪ್ರಾಯವನ್ನು ಕೇಳಲಾಯಿತು. ಒಪ್ಪಿ ವಿವಾಹವಾದ ನಂತರ ಒಂದು ದಿನ ಶಿವ ತಂಗಿಯನ್ನು ನೋಡಲು ಹೋದಾಗ ಇದಕ್ಕೆ ಮನ್ಮಥ ನಿರಾಕರಿಸಿದನು. ಇದಕ್ಕೆ ಪ್ರತಿಯಾಗಿ ಶಿವ ಮನ್ಮಥನನ್ನು ನಿರ್ಗತಿಕನಾಗಿ ಮಾಡಿದನು. ಎಷ್ಟು ಸ್ಥಿತಿವಂತನಾದರೂ ಅಹಂಕಾರ ಸಲ್ಲದು ಎಂಬುದು ಇಲ್ಲಿ ಗೊತ್ತಾಗುತ್ತದೆ.

ಲವಕುಶರ ಕಾಳಗದಲ್ಲಿಯೂ ಸ್ತ್ರೀಯ ಮನಸ್ಥಿತಿಯನ್ನು ಕಾಣಬಹುದು. ಗರ್ಭಿಣಿಯಾಗಿದ್ದ ಸೀತೆಯನ್ನು ನೋಡಿದ ವಶಿಷ್ಠರು ಜ್ಞಾನದೃಷ್ಟಿ ತಳೆದು ನೋಡಿ ಅರಣ್ಯದೋಳಿಕೆ ಹೆರುವೋಳೆಂದೆನುತಲಿ, ಮರುಗಿ ಚಿಂತಿಸಿದರಂತೆ ಶೂರ್ಪನಖಿ ಕೊರವಿಯ ವೇಷ ಧರಿಸಿ ಸೀತೆಯ ಬಳಿ ಬಂದು ರಾವಣನ ಚಿತ್ರ ಬರೆಯಲು ಒತ್ತಾಯಿಸಿಸುತ್ತಾಳೆ. ಸೀತೆ ಒಪ್ಪದಿದ್ದಾಗ ಮರಳು ತಂದು ಭಸ್ಮ ತೊಳೆದು ಸಿಂಪಡಿಸುತ್ತಾಳೆ. ಆಗ ಸೀತೆ ತನಗೆ ರಾವಣನ ಅಂಗುಷ್ಠ ಮಾತ್ರ ಗೊತ್ತು ಎಂದರೂ ಬಿಡದೆ ಒತ್ತಾಯದಿಂದಲೇ ರಾವಣನ ಚಿತ್ರ ಬರೆಸಿ ಎಂದೆಂದಿಗೂ ಅಳಿಯದಂತೆ ಅದಕ್ಕೆ ಸೀತೆಯಿಂದ ವರ ಕೊಡಿಸುತ್ತಾಳೆ. ಸೀತೆ ವರ ಕೊಡುವಾಗ ಕರಿಯ ಲಕ್ಷ್ಮಣ ಹೊಡೆದರ ಮಹಿ ಎಂಬ ನಿರ್ಬಂಧವನ್ನು ಇಡುತ್ತಾಳೆ. ಚಿಂತಿತಳಾದ ಸೀತೆ ಅದನ್ನು ಹಾಸಿಗೆಯ ಕೆಳಗೆ ಮುಚ್ಚಿಟ್ಟು ಮಲಗುತ್ತಾಳೆ. ರಾಮ ಬಂದು ಮಂಚದ ಮೇಲೆ ಬಂದು ಕುಳಿತಾಗ ಮಂಚ ಮುರಿಯಲು ರಾವಣನ ಪಟ ಕುಣಿಯಲಾರಂಭಿಸುತ್ತದೆ. ಆಗ ರಾಮ

ಏಸು ದಿವಸ ಘಾಸಿಯಾಗಿ ಬರೆದಿ ಇವನ ಏಸುದಿವಸ ಭೋಗಿಸಿದಿ
ಮೋಸ ಮಾಡಿದಿ ದೇವಿ ಎನಕೂಡ ಹೇಳದೆ ಘಾಸಿ ಮಾಡಿದಿ ಎನ್ನ[೫]

ಎಂದು ಸಿಟ್ಟಿನಿಂದ ಕೇಳಿದಾಗ ಸೀತೆ ನಡೆದದ್ದನ್ನು ವಿವರಿಸುತ್ತಾಳೆ. ನಂತರ ವಾಲ್ಮೀಕಿ ಆಶ್ರಮದಲ್ಲಿ ಲವಕುಶರು ಹುಟ್ಟಿ ಬಾಲರಾಗುತ್ತಾರೆ. ರಾಮನ ಅಶ್ವಮೇಧಯಾಗ ಆರಂಭವಾಗಿ ಕುದುರೆ ಲವಕುಶರ ಆಶ್ರಮಕ್ಕೆ ಬರುತ್ತದೆ. ಮಕ್ಕಳು ಕುದುರೆಯನ್ನು ಕಟ್ಟಿಹಾಕಲು ಯುದ್ಧ ಆರಂಭವಾಗುತ್ತದೆ. ವಾಲ್ಮೀಕಿಯಿಂದ ವಿಚಾರವೆಲ್ಲಾ ತಿಳಿದು ಕಥೆಯು ಸುಖಾಂತ್ಯವಾಗಿ ಕಾಣುತ್ತದೆ. ರಾಮ ಲಕ್ಷ್ಮಣ ಸೀತೆ ಲವಕುಶರು ಒಂದಾಗಿ ಅಯೋಧ್ಯೆಗೆ ಹಿಂದಿರುಗುತ್ತಾರೆ. ಈ ಕಥಾ ಭಾಗದಲ್ಲಿ ಶೂರ್ಪನಖಿ ಮತ್ತು ಸೀತೆ ಸಂಭಾಷಣೆ ಮತ್ತು ರಾಮ ಮತ್ತು ಸೀತೆಯರ ನಡುವಿನ ಅನೈತಿಕ ಸಂಬಂಧದ ವಿಚಾರದ ಚರ್ಚೆಯನ್ನು ಕಾಣಬಹುದು. ಗಿರಿಯಮ್ಮ ತನ್ನ ಕಥಾಭಾಗದಲ್ಲಿ ಕೂಡ ಹೆಣ್ಣು ಗಂಡು ನಡುವಿನ ದೇಹ ಮನಸ್ಸಿನ ನಡುವಿನ ಭಿನ್ನತೆಯನ್ನು ಬಹಳ ವಿಶೇಷವಾಗಿ ನಿರೂಪಿಸಿದ್ದಾರೆ.

ಲೌಕಿಕದಲ್ಲಿ ಅಕ್ಕಮಹಾದೇವಿಯಂಥ ಅನುಭಾವಿಯ ದುರಂತವೆಂದರೆ ಈ ಸಾಧನಗಳು ಮನುಷ್ಯಪ್ರೇಮವನ್ನು ಸಾಧ್ಯ ಮಾಡುವಂಥ ನೆಲೆಯಲ್ಲಿಲ್ಲ. ವ್ಯಕ್ತಿ–ವ್ಯಕ್ತಿಯ ಸಂಬಂಧದಲ್ಲಿ ಮುಖ್ಯ ಸಾಧನಗಳಾದ ಇವುಗಳು ಕುರೂಪಗೊಂಡ ವಾತಾವರಣವನ್ನು ಎತ್ತಿಹಿಡಿಯುವುದರಲ್ಲಿ ಸಮರ್ಥವಾಗಿವೆ ಹೀಗಾಗಿ ಅರಿವಿನ ಮೂಲಕ ಶಬ್ದಗಳ ಮೂಲಕ ಸಾಧ್ಯವಾಗುವ ಸಂಬಂಧವು ಅತ್ಯಂತ

ಕೃತಕಗೊಂಡದ್ದಾಗಿದೆ. ಇವುಗಳನ್ನು ಮೀರುವುದು ಅಂದರೆ ಲೌಕಿಕದ ಕೃತ್ರಿಮತೆಯನ್ನು ದಾಟುವುದು ಎಂದೇ ಅರ್ಥ. ಆದ್ದರಿಂದಲೇ ಅವುಗಳನ್ನು ಮೀರುವ ಮತ್ತು ವೈಯಕ್ತಿಕ ನೆಲೆಯಲ್ಲಿ ಹೊಸ ಅಸ್ತಿತ್ವವನ್ನು ರೂಪಿಸುವ ಆಶಯವು ಇಲ್ಲಿ ಮುಖ್ಯವಾದದ್ದಾಗಿದೆ.

ಸ್ತ್ರೀಯಲ್ಲ ಪುರುಷನಲ್ಲ ನಪುಂಸಕನಲ್ಲ ಆತ್ಮನೆಂದರಿಯಬಹುದಲ್ಲದೇ ಕಾಣಿಸಬಾರದು (ಚಂದಿಮರಸ) ಎಂದು ಸ್ತ್ರೀ ಪುರುಷ ತತ್ವಗಳನ್ನು ಆತ್ಮದ ಸಮಾನ ನೆಲೆಯಲ್ಲಿ ನಿರ್ವಚಿಸಿದ ಶರಣ ಚಳುವಳಿಯ ಪ್ರಧಾನ ಆಶಯವು ಮಹಿಳೆಯರ ಆತ್ಮವಿಶ್ವಾಸವನ್ನು ವರ್ಧಿಸಿ ಕೀಳರಿಮೆಯನ್ನು ಕಳೆಯುವಲ್ಲಿ ಬಹುದೊಡ್ಡ ಶಕ್ತಿಯಾಗಿ ಪರಿಣಮಿಸಿತು. ಹರಿದಾಸ ಪರಂಪರೆಯಲ್ಲಿ ಮಹಿಳೆ ತನಗಾದ ಅನ್ಯಾಯಕ್ಕೆ ಪುರುಷರನ್ನು ವಿರೋಧಿಸುವ ಅವಕಾಶ ತೆಗೆದುಕೊಳ್ಳುವುದಿಲ್ಲ. ದೈವಿ ನೆಲೆಯಿಂದಲೇ ಕಷ್ಟಗಳನ್ನು ಎದುರಿಸಿ ಜೀವನಪ್ರೀತಿಯನ್ನು ಬಳಸಿಕೊಂಡು ಬದುಕನ್ನು ಅರ್ಥಪೂರ್ಣಗೊಳಿಸಿದ್ದಾರೆ.

**ಅಡಿ ಟಿಪ್ಪಣಿ**

೧ ಡಾ॥ ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ಮುದ್ರಣ, ೧೯೮೮ ಪುಟ: ೧೫೧

೨ ಅದೇ ಪುಟ:೧೬೦

೩ ಟಿ.ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭ ಪುಟ: ೩೦

೪ ಅದೇ ಪುಟ: ೩೦

೫ ಅದೇ ಪುಟ: ೧೧

## ೩.)ಲಿಂಗಾಧಾರಿತ ರಾಜಕಾರಣ:-

ರಾಜಕಾರಣವೆನ್ನುವುದು ಅಧಿಕಾರ-ಅನಧಿಕಾರಗಳ ನಡುವಣ ಸಂಬಂಧದ ನಿರ್ವಚನ ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗದ ನಡುವೆ ಇರುವ ಸಂಬಂಧವನ್ನು ರಾಜಕಾರಣವು ವ್ಯಾಖ್ಯಾನಿಸುತ್ತದೆ. ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ಹಿಡಿತ ಸಾಧಿಸುವುದನ್ನು ರಾಜಕಾರಣವು ಚಚಿಸುತ್ತದೆ. ಈ ಸಂಗತಿಗಳ ಹಿಂದಿರುವ ನ್ಯಾಯ ಮತ್ತು ಕಾನೂನನ್ನು ಅದು ವಿವೇಚಿಸಲು ಪ್ರಯತ್ನಿಸುತ್ತದೆ. ಲೈಂಗಿಕ ರಾಜಕಾರಣವೆಂದರೆ ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಓಬ್ಬರ ಮೇಲೆ ಮತ್ತೊಬ್ಬರೂ ಅಧಿಕಾರ ನಡೆಸುವರು, ಇದರಿಂದ ಒಂದು ವರ್ಗವು ಮಾನಸಿಕ ಒತ್ತಡಕ್ಕೆ ಗುರಿಯಾಗುತ್ತದೆ. ಲೈಂಗಿಕ ರಾಜಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆಯಾಗಿದೆ ಎಂದು ಕೇಟ್ ಮಿಲ್ಲೆಟ್ ಹೇಳುತ್ತಾಳೆ.[1] ಫುಕೋ ಕೂಡ ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ. ಲೈಂಗಿಕ ವ್ಯತ್ಯಾಸವು ಅಧಿಕಾರದ ವರ್ಗಾವಣೆಯ ಪ್ರಮುಖ ಅಂಶಗಳಲ್ಲಿ ಒಂದು. ಅಧಿಕಾರವೆನ್ನುವುದು ಗಂಡು, ಹೆಣ್ಣು, ಯುವಕರು, ಮುದುಕರು, ಪಾಲಕರು ಮತ್ತು ಮಕ್ಕಳು ಆಡಳಿತ ವರ್ಗ ಮತ್ತು ಸಾಮಾನ್ಯ ಜನತೆಯ ನಡುವೆ ಹರಿಹಂಚಾಗಿ ಹೋಗುತ್ತದೆ. ಈ ದೃಷ್ಟಿಯಿಂದಲೇ ಗಂಡು ಅಧಿಕಾರದ ಸಂಕೇತವಾದರೆ ಹೆಣ್ಣು ಶೋಷಿತವರ್ಗದ ಪ್ರತಿನಿಧಿಯಾಗಿರುತ್ತಾಳೆ. ಸ್ತ್ರೀಯು ಗುಲಾಮಶಕ್ತಿಯ ಪ್ರಾತಿನಿಧಿಕ ರೂಪವಾಗಿದ್ದಾಳೆ.

ವಚನ ಸಾಹಿತ್ಯದ ಅಕ್ಕಮಹಾದೇವಿಯು ಕೌಶಿಕನ ಮತ್ತು ಚನ್ನಮಲ್ಲಿಕಾರ್ಜುನನ ನಡುವೆ ಭಕ್ತಿಯ ರಾಜಕಾರಣ ಕಂಡುಬಂದಿದ್ದು ಇದರಲ್ಲಿ ಕೆಲವರ್ಗದ ಮನುಷ್ಯನಾಗಿ ಕೌಶಿಕನು ಮತ್ತು ಮೇಲ್ವರ್ಗದಲ್ಲಿ ಚನ್ನಮಲ್ಲಿಕಾರ್ಜುನನ್ನು ಆ ಸ್ಥಾನದಲ್ಲಿ ಇರಿಸಲಾಗಿದೆ. ಅದೇ ತನ್ನ ಗಂಡನಾದ ಕೌಶಿಕನ ದೃಷ್ಟಿಯಲ್ಲಿ ಲೈಂಗಿಕ ರಾಜಕಾರಣ ಅಕ್ಕಮಹಾದೇವಿ ಮತ್ತು ಕೌಶಿಕನ ನಡುವೆ ನಡೆದಿದ್ದು ಅಕ್ಕ ಇದನ್ನು ಮೀರಿ ನಿಂತಳು, ಮಾನಸಿಕ ಓತ್ತಡಕ್ಕೆ ಗುರಿಯಾದವನು ಕೌಶಿಕ, ಗಂಡು ಅಧಿಕಾರದ ಸಂಕೇತವಾದರೆ ಕೌಶಿಕನ ಆ ಯಜಮಾನಿಕೆಯ ಅಕ್ಕನ ಮುಂದೆ ನಡೆಯುವುದಿಲ್ಲ. ಚನ್ನಮಲ್ಲಿಕಾರ್ಜುನನ್ನು ಅವನೇ ನನ್ನ ಗಂಡ ಮಿಕ್ಕ ಗಂಡಸರೆಲ್ಲಾ ನನ್ನ ಸಹೋದರರು ಎಂದು ಒಂದು ಕಡೆ ಅಕ್ಕ ಹೇಳಿಕೊಂಡಿದ್ದಾಳೆ.

ಬುದ್ಧಿಗೇಡಿ ತನದಿಂದ ಪರಮಾರ್ಥ ಸುಖವ ಹೋಗಲಾಡಿಸಿಕೊಂಡು
ಇದಾವ ಕಾರಣವೆಂದರಿಯದೆ
ನೀವು ನರಕ ಹೇತುವೆಂದರಿತು ಮನಹೇಸದೆ ಬಂದಿರಣ್ಣಾ
ಚನ್ನಮಲ್ಲಿಕಾರ್ಜುನಲ್ಲದೇ ಮಿಕ್ಕಿಹ ಪುರುಷರೆನಗೆ ಸಹೋದರರು
ಛೀ ಹೋಗಾ ಮರುಳೆ.[2]

ಬಾಲ್ಯದಿಂದಲೇ ಅಕ್ಕನಲ್ಲಿ ಅತಿವೈರಾಗ್ಯ, ಭಕ್ತಿ ಬೆಳೆದಂತೆ ಅದು ಹೆಚ್ಚಾಗುತ್ತಿದ್ದರಿಂದ ಅಕ್ಕಳಿಗೆ ಈ ರೀತಿಯ ದ್ವಂದ್ವ ನಿಲುವು ಉಂಟಾದವು.

ಮಲ್ಲಿಕಾರ್ಜುನನ ಸಂಬಂಧವನ್ನು ಆಶಿಸುವ ಅಕ್ಕಮಹಾದೇವಿ ವಚನಗಳಲ್ಲಿ ಪ್ರೇಮದ ಅನುಭೂತಿಯೆಲ್ಲಾ ಬಹಳ ಪರಿಣಾಮಕಾರಿಯಾಗಿ ವ್ಯಕ್ತವಾಗುವುದು, ಲೈಂಗಿಕ ಪ್ರತಿಮೆಗಳ ಮೂಲಕ ಹೇಳುವ ಸಂದರ್ಭಗಳಲ್ಲಿಯೇ ಮಲ್ಲಿಕಾರ್ಜುನನೊಡನೆ ತನ್ನ ಅಸ್ತಿತ್ವದ ನೆಲೆಗಳನ್ನು ರೂಪಿಸಿಕೊಳ್ಳುವ ಸ್ವರೂಪಗಳು ಮುಖ್ಯವಾಗಿ ಇವಳಲ್ಲಿ ನಲ್ಲೆ -ನಲ್ಲನ ಹೆಂಡತಿ- ಗಂಡನ ರೀತಿಯದ್ದೇ ಅಗಿವೆ. ಲೌಕಿಕದೇ

ಆದಂತ ಇಂತ ಸಂಬಂದವು ಅರ್ಥಪೂರ್ಣವಾಗದೇ ಇರುವ ಸಂಬಂಧವನ್ನು ಈ ಹೊಸ ಆಶಯದ ಬಯಕೆಯು ಹೇಳುತ್ತದೆ. ಲೈಂಗಿಕ ಪ್ರತಿಮೆಗಳು ಸಂಪ್ರದಾಯದ ಚೌಕಟ್ಟುಗಳ ಎಲ್ಲೆಯನ್ನು ಮೀರುತ್ತದೆ. ಅವುಗಳ ತೀವ್ರತೆಯಂತೂ ಅವಳ ಒಂಟಿತನದ ತೋಳಲಾಟದ ಅಭಿವ್ಯಕ್ತಿಯ ಸಂದರ್ಭವನ್ನು ಹೆಚ್ಚು ಸ್ಪುಟವಾಗುತ್ತದೆ.

ಅಕ್ಕನ ಲಿಂಗಸಂಬಂಧಿ ಆಶಯಗಳು ಚನ್ನಮಲ್ಲಿಕಾರ್ಜುನನ್ನು ತಾನು ಲೀನವಾಗುವ ಆಕಾಂಕ್ಷೆ ಕನಸು ಕಾಣುವ ಪ್ರಕ್ರಿಯೆಯನ್ನು ತನ್ನ ವಚನಗಳಲ್ಲಿ ಬಿಂಬಿತವಾಗಿದೆ. ಚನ್ನಮಲ್ಲಿಕಾರ್ಜುನನ ಕೂಡ ತನ್ನ ಒಡನಾಟವನ್ನು ವಿವರಿಸುವ ಇವಳ ಅನೇಕ ವಚನಗಳ ಮುಖ್ಯ ವಾತಾವರಣವು ಕನಸುಗಳದ್ದೇ ಆಗಿದೆ. **ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ, ಕೇಳುತ್ತ ಕೇಳುತ್ತ ಮೈಮರೆದೊರಗಿದೆ, ನೋಡವ್ವಾ ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತು ಕೇಳವ್ವಾ,** ಎನ್ನುವ ವಚನ ಹಾಗೂ **ಕೇಳವ್ವಾ, ಕೇಳವ್ವಾ ಕೆಳದಿ ನಾನೊಂದು ಕನಸುವ ಕಂಡೆ, ಗಿರಿ ಮೇಲೊಬ್ಬ ಗೊರವ ಕುಳ್ಳಿರ್ದುದ ಕಂಡೆ** ಎನ್ನುವ ವಚನದಲ್ಲಿನ ಅಕ್ಕ ಚನ್ನಮಲ್ಲಿಕಾರ್ಜುನನ ಪ್ರೇಮ ಸಂಬಂಧದಲ್ಲಿ ಕನಸು ಕಾಣುವ ಪ್ರಕ್ರಿಯೆಯಲ್ಲಿ ವ್ಯಕ್ತವಾಗುತ್ತದೆ.

ಅಕ್ಕನ ಈ ರೀತಿಯ ಮನಸ್ಸಿನ ವರ್ತನೆಯನ್ನು ಮತ್ತು ಕನಸು ಕಾಣುವ ಬಗೆಗೆ ಅಧ್ಯಯನ ಮುಖ್ಯವೆನಿಸುತ್ತದೆ. ಸಿಗ್ಮಂಡ್ ಫ್ರಾಯ್ಡ್ ಮನಸ್ಸಿಗೆ ಸಂಬಂಧಿಸಿದ ತನ್ನದೇ ಆದ ನಿಲುವುಗಳನ್ನು ಪ್ರಸ್ತಾಪಿಸುತ್ತಾನೆ. ಅವನ ವಿಚಾರಗಳು ಮಕ್ಕಳು ಜೀವನದ ಪ್ರತಿಯೊಂದು ಹಂತದಲ್ಲಿ ವಿಭಿನ್ನವಾದ ಮಾನಸಿಕ, ಲೈಂಗಿಕ ಅನುಭವಗಳನ್ನು ಪಡೆಯುತ್ತಾರೆ. ಲಿಂಗವ್ಯವಸ್ಥೆ ಎನ್ನುವುದು ಲೈಂಗಿಕ ಪಕ್ವತೆಯ ಒಂದು ಸೃಷ್ಟಿ, ವಿಭಿನ್ನವಾದ ಲೈಂಗಿಕ ಅನುಭವಗಳಿಗೆ ಒಳಪಡುವ ಬಾಲಕ ಬಾಲಕಿಯರು ವಿಭಿನ್ನ ಲಿಂಗ ಪಾತ್ರಗಳನ್ನು ಸ್ವೀಕರಿಸುತ್ತಾರೆ ಎಂಬುದು ಅವನ ವಿಚಾರವಾಗಿತ್ತು.

ಕನಸುಗಾರಿಕೆಯ ಮೂರು ಲಕ್ಷಣಗಳನ್ನು ಪ್ರೈ ಒಂದು ಕಡೆಗೆ ವಿವರಿಸುತ್ತಾನೆ. ಅವನ ಪ್ರಕಾರ ಅವುಗಳು ವಿವರಿಸುವ ವಲಯ ವಾಸ್ತವವಲ್ಲದಿದ್ದರೂ ಗ್ರಹಿಸುವ ಆಶಯವಾಗಿಯೇ ಬರುತ್ತವೆ. ದುಃಖ ಆತಂಕಗಳಿಂದ ಸಂಪೂರ್ಣ ಮುಕ್ತವಾಗಿ ಇಚ್ಚೆಗಳ ಪೂರೈಕೆಯ ವಲಯಗಳಾಗಿ ಇವು ಮೂಡುತ್ತವೆ. ಮತ್ತು ಈ ಕನಸಿನ ಜಗತ್ತು ಕನಸು ಕಾಣುವವನ ಮನಸ್ಸಿನ ಆವರಣಕ್ಕೆ ಮಾತ್ರ ಸೀಮಿತವಾಗಿರುತ್ತದೆ.

ಕನಸುಗಾರಿಕೆಯು ವ್ಯಕ್ತಿಯ ಅಭೀಪ್ಸೆಯ ಹಾಗೂ ಅದೇ ಕಾರಣದಿಂದಾಗಿ ಅವನ ಒಂಟಿತನದ ಪ್ರತೀಕವಾಗಿ ರೂಪುಗೊಳ್ಳುತ್ತದೆ. ಪ್ರೈ ಹೇಳುವ ಮೂರು ಲಕ್ಷಣಗಳು ವ್ಯಕ್ತಿಯ ವೈಯಕ್ತಿಕತೆಯನ್ನೇ ಎತ್ತಿ ಹೇಳುವುದನ್ನೇ ಗಮನಿಸಬಹುದು. ಒಂದು ರೀತಿಯಲ್ಲಿ ಇದು ಸಮಾಜವು ರೂಪಿಸುವ ನಿಯಮಗಳನ್ನು ದಾಟಿರುವ ಬಗೆಯೂ ಆಗಿದೆಯೆನ್ನಬಹುದು. ಅಕ್ಕನ ವಚನ ಕನಸುಗಾರಿಕೆಯು ಈ ಎಲ್ಲ ಸ್ವರೂಪವನ್ನು ನಿಚ್ಚಳವಾಗಿ ಅಭಿವ್ಯಕ್ತಿಸುತ್ತದೆ.

ವಚನ ಚಳುವಳಿಯಲ್ಲಿ ಪ್ರಮುಖವಾಗಿ ಕಂಡುಬರುವ ಸ್ತ್ರೀ ವಚನಕಾರ್ತಿ ಅಕ್ಕಮಹಾದೇವಿ. ಸ್ತ್ರೀ ಪುರುಷ ಎಲ್ಲೆಯನ್ನು ಮೀರಿನಿಂತವಳು. ಅಂದಿನ ಕಾಲದಲ್ಲಿ ಕಡೆಗಣಿಸಿದ್ದ ಮಹಿಳೆಯರಿಗೆ ಸಾಹಿತಿಕ ಸ್ಥಾನಮಾನ ಕಲ್ಪಿಸಿದ ಕಾಲ ಅದು. ಲಿಂಗಭೇದದಿಂದಾಗಿ ಹೆಣ್ಣುಮಕ್ಕಳು ಬರವಣಿಗೆಯ ಅವಕಾಶವನ್ನು ಪಡೆಯಲಾಗದಿದ್ದಾಗ ಭಕ್ತಿ ಚಳುವಳಿಗಳು ಜಾತಿಭೇದ ಲಿಂಗಭೇದಗಳನ್ನು ಮೀರಿ ಹೆಣ್ಣುಮಕ್ಕಳಿಗೂ ಅವಕಾಶ ಕಲ್ಪಿಸಿದವು. ಪಾರಮಾರ್ಥ ಸಾಧನೆಗೆ ಲಿಂಗಭೇದ ಜಾತಿಭೇದವಿಲ್ಲ. ಇದಕ್ಕೆ ಎಲ್ಲರೂ ಅರ್ಹರೆಂದು ಪ್ರತಿಪಾದಿಸಿತು. ಇದಕ್ಕೆ ಸಮರ್ಥನೆಯಾಗಿ ಪುರುಷಕೇಂದ್ರಿತ ವ್ಯವಸ್ಥೆಯನ್ನು ದಾಟಿದ ಅಕ್ಕ

ಅನುಭವ ಮಂಟಪದವರೆಗೂ ಇವಳ ಕೀರ್ತಿ ಹರಡಿತು. ಶರಣರು ಮೆಚ್ಚಿದ ವಚನಕಾರ್ತಿಯಾಗಿ ತನ್ನದೇ ಆದ ಪ್ರಭುತ್ವ ಸಾಧಿಸಿದಳು ಈಕೆ.

ದಾಂಪತ್ಯ ಜೀವನವನ್ನು ದಾಟಿ ಅಧ್ಯಾತ್ಮವನ್ನು ಸಾಧಿಸಲು ಸಂಸಾರ ತ್ಯಜಿಸಿದ ಅಕ್ಕಮಹಾದೇವಿ ಒಂದು ಕಡೆಯದರೆ ಮತ್ತೊಂದು ಕಡೆ ಸಂಸಾರದಲ್ಲಿದ್ದುಕೊಂಡೆ ಅಧ್ಯಾತ್ಮ ಸಾಧಿಸಲು ನಿಂತ ಗಿರಿಯಮ್ಮ ಭಕ್ತಿ, ಪ್ರೀತಿ, ವಿರಹ. ಲೈಂಗಿಕ ಸಂಬಂಧಿ ಭೇದಗಳಿಂದ ತಮ್ಮ ಪ್ರವೃತ್ತಿಯನ್ನು ಜೀವನಶೈಲಿಯನ್ನು ಬದಲಾಯಿಸಿಕೊಂಡರು

ಮಾನವೀಯ ಸಂಬಂಧಗಳ ಜೊತೆಗೆ ಗಿರಿಯಮ್ಮ ತನ್ನ ಕೀರ್ತನೆಗಳ ಮೂಲಕ ದೈವಿ ಸ್ವರೂಪಿಯಾಗಿ ಪರಿವರ್ತನೆ ಹೊಂದಿದ್ದಳು. ತಂದೆ ತಾಯಿಗಳ ಮುಖವನ್ನು ಅರಿಯದೇ ಒಂಟಿತನದ ಜೀವನವನ್ನು ಮಾಡಿ ತನ್ನ ಬದುಕಿನಲ್ಲಿ ದೈವತ್ವದ ಕಲ್ಪನೆಯನ್ನು ಸಂಕೀರ್ಣ ಘಟನೆಗಳನ್ನು ಪವಾಡಗಳಾಗಿ ಪರಿವರ್ತಿಸಿದರು. ಲಿಂಗಸಂಬಂಧಿ ನೆಲೆಯನ್ನು ಮೀರಿ ನಿಂತು ದೈವಿಕತೆಯಾಗಿ ಪರಿವರ್ತನೆ ಹೊಂದಿದ್ದರಿಂದ ತನ್ನ ಪಾರಮಾರ್ಥ ಸಾಧನೆಯನ್ನು ಸಾಧಿಸಲು ಕೆಲವು ಅಂಶಗಳು ಸಹಕಾರಿಯಾದವು. ಗಿರಿಯಮ್ಮನಿಗೆ ತನ್ನ ವಿರಹಭಕ್ತಿಯು ಕೂಡ ವಿಷ್ಣುವಿನಲ್ಲಿ ಲೀನವಾಯಿತು.

ಗಿರಿಯಮ್ಮ ಮತ್ತು ಅಕ್ಕನ ಬದುಕಿನಲ್ಲಿ ಹಲವಾರು ರೀತಿಯ ವೃತ್ತಿಗೆ ಮತ್ತು ಧರ್ಮದ ವಿಚಾರಕ್ಕೆ ಸಂಬಂಧಿಸಿದಂತೆ ಗಂಡ ಹೆಂಡತಿಯರಲ್ಲಿ ಹಲವು ವಿಭಿನ್ನತೆ ಭೇದವಿರುವುದು ಕಂಡುಬರುತ್ತದೆ. ಧಾರ್ಮಿಕ ವ್ಯಾಖ್ಯಾನದೊಳಗೆ ಹೆಣ್ಣು ನಿರ್ವಹಿಸುವ ಕೆಲಸಗಳು ಕೂಡಾ ಬೇರೆ ಬೇರೆಯೆಂದು ಕರೆದಿರುವುದು. ಈ ಕಾರಣಕ್ಕೆ ವಚನಕಾರ್ತಿಯರು ತಮ್ಮ ವೃತ್ತಿಗೆ ಸಂಬಂಧಿಸಿದಂತೆ ತಮ್ಮ ನಾಮಧೇಯಗಳನ್ನು ಇಟ್ಟುಕೊಂಡು ಸಾಹಿತ್ಯ ರಚಿಸಿದರೆ ಅಕ್ಕ ಭಕ್ತಿಯನ್ನು ಕಾಯಕ ಮಾಡಿಕೊಂಡರು. ಅದರ ಹಿನ್ನಲೆಯಲ್ಲೇ ಸಾಹಿತ್ಯ ರಚಿಸಿದರು. ಭಿನ್ನತೆಗೆ ಸಂಬಂಧಿಸಿದಂತೆ ಧರ್ಮಕ್ಕೆ ಸಂಬಂಧಿಸಿದಂತೆ ಧರ್ಮ ಹೆಣ್ಣಿನ ಕರ್ತವ್ಯವು ಯಾವ ಬಗೆಯದು, ಧರ್ಮದ ದೃಷ್ಟಿಯಿಂದ ಲೈಂಗಿಕ ಭಿನ್ನತೆಗೆ ಯಾವ ಅರ್ಥವಿದೆ.

ಧರ್ಮದ ದೃಷ್ಟಿಯಲ್ಲಿ ಹೆಣ್ಣಿನ ಯಾವ ಕೆಲಸ ಧಾರ್ಮಿಕ, ಯಾವುದು ಅಧಾರ್ಮಿಕ, ಧರ್ಮಕ್ಕೂ ಲೈಂಗಿಕ ಪಾತ್ರ ನಿರ್ವಹಣೆಗೂ ಯಾವ ಸಂಬಂಧವಿದೆ, ಇದು ಸೂಕ್ಷ್ಮವಾಗಿದೆ. ಪುರುಷನನ್ನು ಅನುಕರಿಸಿವುದು ಮಾತ್ರವೇ ಹೆಣ್ಣಿನ ಧರ್ಮವಲ್ಲ. ಜಂಗಮ ಸೇವೆಯು ವೀರಶೈವ ಹೆಣ್ಣಿನ ಕರ್ತವ್ಯಗಳಲ್ಲಿ ಒಂದು, ಭವಿಯನ್ನು ದಾಟುವುದು ಧಾರ್ಮಿಕ ಅ ಭವನನ್ನು ಸೇರುವುದು ಧಾರ್ಮಿಕ ಕಾಯಕವು ಪ್ರಧಾನ. ಇದರಲ್ಲಿ ಗಂಡುಹೆಣ್ಣಿನ ವ್ಯತ್ಯಾಸವಿಲ್ಲ, ಬ್ರಾಹ್ಮಣ ಪಠ್ಯಗಳ ಪ್ರಕಾರ ಗಂಡಿನ ಸೇವೆಯು ಧಾರ್ಮಿಕ. ಗಂಡನೊಂದು ಧರ್ಮ, ಹೆಂಡತಿಯೊಂದು ಧರ್ಮವೆನ್ನುವುದಕ್ಕೆ ಬ್ರಾಹ್ಮಣ ಪಠ್ಯಗಳಲ್ಲಿ ಮಾನ್ಯತೆಯಿಲ್ಲ. ವೈದಿಕ ಧರ್ಮವನ್ನು ಎಲ್ಲರೂ ಅನುಕರಿಸಿದರು ಎಂದರ್ಥವಲ್ಲ, ಜಾತಿಧರ್ಮವನ್ನು ಮೀರಿ ಲೈಂಗಿಕ ಸಂಬಂಧವಿರಿಸಿಕೊಂಡ ಸ್ತ್ರೀಯರಲ್ಲಿ ಹುಟ್ಟುವ ಮಕ್ಕಳದು ಒಂದೊಂದು ಜಾತಿಯಾಗಿರುತ್ತದೆ. ವೀರಶೈವ ಧರ್ಮದಲ್ಲಿ ಸ್ತ್ರೀಯರು ಲಿಂಗದೀಕ್ಷೆ ಪಡೆದುಕೊಳ್ಳುವ ಅವಕಾಶವಿದೆ. ಅಂದರೆ ಧಾರ್ಮಿಕ ವ್ಯವಹಾರದಲ್ಲಿ ಹೆಣ್ಣಿಗೂ ಸ್ವತಂತ್ರವಾದ ಸರಿಸಮಾನವಾದ ಹಕ್ಕು ಇದೆ. ಧರ್ಮಕ್ಕೆ ಸಂಬಂಧಿಸಿದಂತೆ ಇದನ್ನು ಮೀರಿ ಭಕ್ತಿ ಸಾಧನೆಗೆ ಧರ್ಮದ ನೆಲೆ ನಿಂತು ಸಾಹಿತ್ಯ ರಚನೆಯನ್ನು ಅಕ್ಕ ಮತ್ತು ಗಿರಿಯಮ್ಮ ಮಾಡಿದರು. ಪರಮಾತ್ಮನನ್ನು ಪತಿಯಾಗಿ ಅರಾಧಿಸಿ ಆತನ ಸಾಮೀಪ್ಯ ಸಮಾಗಮಕ್ಕಾಗಿ ವಿಧ ವಿಧವಾಗಿ ಹಂಬಲಿಸುವ ಅಕ್ಕನ ಉತ್ಕಟ ಪ್ರೇಮ, ಆಂತರಂಗದ ವೇದನೆ, ಶಬ್ದ

ಪ್ರಪಂಚದಲ್ಲಿ ನಿಗಿನಿಗಿಸಿದೆ. **ಎರೆಯಂತೆ ಕರಕರಗಿ, ಮಳಲಂತೆ ಜರಜರಿದು, ಕನಸುಗಳಲ್ಲಿ ಹೆಚ್ಚಿನಂತೆ ಸುಳಿಸುಳಿದು,**[5] ಬೆಂದ ಆಕೆಯ ನೋವು ಕಾವ್ಯವಾಗುವ ಪರಿಯನ್ನು ನೋಡಬಹುದು

ಪ್ರಾಚೀನ ಕಾಲದಿಂದಲೂ ಹೆಣ್ಣಿಗೆ ಕನಿಷ್ಠ ಮಟ್ಟದ ಸ್ಥಾನಮಾನ ನೀಡಲಾಗಿದ್ದು ಅವಳ ಮೇಲೆ ಹಲವು ರೀತಿಯ ಸಂಕಷ್ಟಗಳ ಸರಮಾಲೆಯನ್ನು ಹೇರಿದ್ದೇವೆ. ಅದರ ವಿರುದ್ಧವಾಗಿ ಗಿರಿಯಮ್ಮ ಪ್ರತಿರೋಧ ಒಡ್ಡುತ್ತಾಳೆ. ತನ್ನ ಹಾಡಿನಲ್ಲಿ ಉದ್ದಾಳಿಕನ ಕಥೆಯಲ್ಲಿ ಚಂದ್ರವತಿ ಗರ್ಭವತಿಯಾದ ಸಂದರ್ಭದಲ್ಲಿ ಆಕೆಯನ್ನು ಮುಗಿಸುವ ಯೋಚನೆಯನ್ನು ಅವಳ ತಂದೆ ಮಾಡುತ್ತಾನೆ. ಕೊನೆಯ ಹಂತದಲ್ಲಿ ಯೋಚಿಸಿ ಸ್ತ್ರೀಹತ್ಯಾದೋಷದ ಭೀತಿ ಕಾಡುತ್ತದೆ, ಎಂದು ತಿಳಿದು ಕಾಡಿಗೆ ಅಟ್ಟುತ್ತಾನೆ. ಹೆಣ್ಣಿನ ಶೀಲದ ಪರಿಕಲ್ಪನೆ ಅಧಿಕಾರಷಾಹಿಯಲ್ಲಿರುವ ಕೌರ್ಯ ಸುವ್ಯಕ್ತ ಚಂದ್ರವತಿಯ ಮೂಲಕ ಗಿರಿಯಮ್ಮ ವಿಷ್ಣುಭಕ್ತಿಯನ್ನು ಪ್ರಕಟಿಸುತ್ತಾಳೆ. ಅವಿವಾಹಿತ ಹೆಣ್ಣು ಮೂಗಿನಂದ ಪ್ರಸವಿಸಿದಾಗ ಅವಲ ಮಾನಸಿಕ ಪರಿಸ್ಥಿಯನ್ನು ಗಿರಿಯಮ್ಮ ಬಲ್ಲವಳಾಗಿದ್ದಾಳೆ. ಚಂದ್ರವತಿ ಮಗು ಉಳಿಸಿಕೊಂಡರೆ ಲೋಕ ನಗುತ್ತದೆ. ಕೊಂದರೆ ಪಾಪ, ಹಾಗಾಗಿ ನೀರಿನಲ್ಲಿ ಬಿಡುವುದೇ ಲೇಸೆಂದು, ಕುಂತಿ ಕರ್ಣನನ್ನು ಬಿಟ್ಟಂತೆ ಈಕೆಯೂ ನೀರಿನಲ್ಲಿ ಬಿಡುತ್ತಾಳೆ. ಇಂತಹ ಸನ್ನಿವೇಶಗಳನ್ನು ಗಮನಿಸಿದರೆ ಹೆಣ್ಣಿನ ಅಂದಿನ ಪರಿಸ್ಥಿಯ ಬಗ್ಗೆ ಗಂಡು ಮತ್ತು ಹೆಣ್ಣಿನ ಸಂಬಂಧಗಳ ಬಗೆಗೆ ಗಿರಿಯಮ್ಮನ ನಿಲುವು ವ್ಯಕ್ತವಾಗಿದೆ.

ಮಡದಿಯರ ವಸ್ತ್ರಗಳ ಸೆಳೆದುಕೊಂಡು ಕಡಹದ ಮರನೇರುವ
ಮಡುವ ಧುಮ್ಮಿಕ್ಕಿ ಕಾಳಿಂಗನ ಹೆಡೆಯ ತುಳಿದು

ಗಿರಿಯಮ್ಮ ಬಹುಪತ್ನಿತ್ವದ ಪರಿಕಲ್ಪನೆಯನ್ನು ಕೊರವಿಯ ಮೂಲಕ ಹೇಳಲು ಪ್ರಯತ್ನಿಸಿದ್ದಾಳೆ. ಬ್ರಹ್ಮಕೊರವಂಜಿಯ ಮೂಲಕ ಕೃಷ್ಣ ಕಥೆಯನ್ನು ಹೇಳಿದ ಬಳಿಕ ಊಟ ಹಾಕಿ ಸವತಿ ಒಳ್ಳೆಯವಳಿಲ್ಲ ಎಂದು ಕೊರವಿ ಆಗ್ರಹ ಪಡಿಸುತ್ತಾಳೆ.[6] ಹೆಂಡತಿಯರಲ್ಲಿಯೇ ಪರಸ್ಪರ ತಿಕ್ಕಾಟ ನೆಮ್ಮದಿಗೇಡು ಹೆಣ್ಣಿಗೆ ಗಂಡನಿಂದ ಶೋಷಣೆ ಒಂದು ಕಡೆ, ಮತ್ತೊಂದು ಕಡೆ ಹೆಣ್ಣಿನಿಂದಲೇ ಶೋಷಣೆ, ಬೆಂಬಲಿಗರು ಹಿತೈಷಿಗಳಲ್ಲವೆಂದು ತಿಳಿದರಂತೂ ಶೋಷಣೆ ಎರಡು ಪಟ್ಟು ಹೆಚ್ಚು, ಎನ್ನುವಲ್ಲಿ ಗಿರಿಯಮ್ಮನ ಲೋಕಾನುಭವ ಮಡುಗಟ್ಟಿದೆ.

ಸಮಕಾಲೀನ ಸಮಾಜದ ಅಂದಿನ ಮೌಲ್ಯಗಳಿಗೆ ವ್ಯತಿರಿಕ್ತವಾಗಿ ತನ್ನ ಬದುಕಿನ ದಾರಿಯನ್ನು ಹುಡುಕಿಕೊಂಡ ಅಕ್ಕಮಹಾದೇವಿ ಹಲವು ಪ್ರತಿರೋಧ ಎದುರಿಸಿದ್ದಾಳೆ. ಅನುಭವಮಂಟಪಕ್ಕೆ ಬಂದಂತಹ ಅಕ್ಕಮಹಾದೇವಿಯನ್ನು ಪ್ರಭುದೇವರು ಹಲವಾರು ತೀಕ್ಷ್ಣ ಪರೀಕ್ಷೆಗೆ ಗುರಿಪಡಿಸಲಾಗುತ್ತದೆ. ಅನುಭವ ಮಂಟಪದ ಅನುಭಾವ ಪರೀಕ್ಷೆಯು ಮಹಾದೇವಿಯಕ್ಕನ ಬದುಕಿನ ಅತ್ಯಂತ ಸಂಕೀರ್ಣ ಸಂದರ್ಭವಾಗಿದೆ. ಪ್ರಭುತ್ವ ಮತ್ತು ಪುರುಷಾಧಿಕಾರವನ್ನು ಏಕಕಾಲಕ್ಕೆ ಧಿಕ್ಕರಿಸಿ ಅಕ್ಕನ ಪ್ರಖರ ವ್ಯಕ್ತಿತ್ವದ ಪರೀಕ್ಷೆಯಾಗಿರುವ ಪ್ರಸ್ತುತ ಪ್ರಸಂಗವು ಪಾರಲೌಕಿಕನ ಆದರ್ಶಕ್ಕಾಗಿ ಲೌಕಿಕ ನೆಲೆಯಲ್ಲಿ ಮಹಾದೇವಿಯಕ್ಕ ನಡೆಸಿದ ಸಂಘರ್ಷದ ಹಾದಿಯನ್ನು ವಿವೇಚನೆ ಮಾಡಲಾಗಿದೆ. ಪ್ರಭುದೇವ, ಬಸವಣ್ಣ, ಸಿದ್ದರಾಮ, ಶಿವಯೋಗಿ, ಮಡಿವಾಳ ಮಾಚಯ್ಯರಿಂದ ತೀವ್ರ ಪರೀಕ್ಷೆ ಎದುರಿಸಬೇಕಾಯಿತು. ಹೆಣ್ಣೆಂಬ ಕಾರಣಕ್ಕಾಗಿಯೇ ತನ್ನ ಆಸಕ್ತಿಯ ಆಯ್ಕೆಯನ್ನು, ಚಾರಿತ್ರ್ಯ ಶುದ್ಧಿಯನ್ನು, ವೈರಾಗ್ಯದ ಸತ್ವವನ್ನು ಸಾಬೀತುಪಡಿಸಿಕೊಳ್ಳಬೇಕಾದ ವಿಪರ್ಯಾಸಕ್ಕೆ ತುತ್ತಾಗಬೇಕಾಗುತ್ತದೆ. ವಿವಾಹ ತಾಯ್ತನ ಸತಿತ್ವದಾಚೆಗೂ ವಿಸ್ತರಿಸಿಕೊಳ್ಳಬಲ್ಲ ಸ್ತ್ರೀತ್ವದ ಸ್ವತಂತ್ರ ನೆಲೆಗಳನ್ನು ಅನುಭಾವದ ಆಶಯವನ್ನು ಗೌರವಿಸಿದ ಶರಣ

ಸಮುದಾಯವೇ ಮಹಾದೇವಿಯಕ್ಕನ ಆಧ್ಯಾತ್ಮಿಕ ಅಯ್ಕೆಯನ್ನು ಲೌಕಿಕ ಸತಿತ್ವದ ನೆಲೆಯನ್ನು ಪ್ರಶ್ನಿಸಿರಿವುದು ವಿಸ್ಮಯವುಂಟು ಮಾಡುತ್ತದೆ.

ಓಮ್ಮೆ ಕಾಮನ ಕಾಲಹಿಡಿವೆ
ಓಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ
ಸುಡು ವಿರಹವನು ಆರಿಗೆ ಧೃತಿಗೆಡುವೆ
ಚನ್ನಮಲ್ಲಿಕಾರ್ಜುನದೇವನಿನ್ನನೊಲ್ಲದ ಕಾರಣ
ಎಲ್ಲರಿಗೆ ಹಂಗಿತಿಯದೆನವ್ವ

ಮಹಾದೇವಿಯಕ್ಕನ ಲೋಕವಿಲಕ್ಷಣ ವರ್ತನೆಯನ್ನು ಲೋಕಸಮ್ಮತಗೊಳಿಸಲೆತ್ನಿಸಿದ ಪ್ರಭುದೇವರ ಪ್ರಶ್ನೆಗಳಿಗೆ ಮಹಾದೇವಿಯಕ್ಕ ಅಧ್ಯಾತ್ಮಿಕ ನೆಲೆಯಲ್ಲಿಯೇ ಉತ್ತರಿಸುತ್ತ ಹೋಗುತ್ತಾಳೆ. ಲೌಕಿಕದ ಎಲ್ಲ ಗೊಂದಲ ದ್ವಂದ್ವಗಳನ್ನು ಅನುಭಾವದ ತೀವ್ರ ಹಂಬಲದಲ್ಲಿ ದಾಟಿ ಹೋದುದನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾಳೆ. ಸಮಸ್ಯಾತ್ಮಕ ಸಂದಿಗ್ದ ಘಟನೆಗಳಾದ ಆಕೆಯ ವಿವಾಹ, ನಿರ್ವಾಣ, ಮತ್ತು ಕೇಶಾಂಬರ ಸಂಬಂಧಿತ ನೆಲೆಗಳಿಂದಲೇ ಸಂವಾದವು ಪ್ರಾರಂಭಗೊಂಡರೂ ಅಕ್ಕನ ಸರಣಸತಿ ಲಿಂಗಪತಿ ಅನುಭಾವದ ಆಶಯವನ್ನು ಬೆಂಬಲಿಸಿದಂತೆಯೇ ತೋರುತ್ತದೆ. ಅಂತೆಯೇ ತನುಗುಣನಾಸ್ತಿಯಾಗಿ ಲಿಂಗಸಂಗಿಯದ ಮನಗುಣನಾಸ್ತಿಯಾಗಿ ಅರಿವುಸಂಗಿಯಾದ ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನದ ಅಕ್ಕನ ಉಜ್ವಲ ವ್ಯಕ್ತಿತ್ವದ ಸತ್ಯ ಪ್ರಕಟವಾಗಿದೆ. ಪ್ರಭುದೇವ ಪ್ರಶ್ನೆ ಅಕ್ಕನ ಲೋಕವಿಲಕ್ಷಣ ವರ್ತನೆಯನ್ನು ಮತ್ತೆ ಮತ್ತೆ ತೆದಕುತ್ತದೆ. ಕೇಶಾಂಬರವು ಆಂತರಂಗದಲ್ಲಿ ಉಳಿದುಕೊಂಡಿರುವ ಲಜ್ಜೆ ನಾಚಿಕೆ ಮಾನಪಮಾನಗಳ ಕುರುಹಾಗಿ ಭಾವಶುದ್ದಿಯ ಕೊರತೆಯಾಗಿ ಅಕ್ಕನ ಅರಿವಿನ ಮಿತಿಯಾಗಿ ಕಾಣುತ್ತದೆ. ಪ್ರಭುವಿನ ನಿಷ್ಠುರ ವಿಮರ್ಶೆಗೆ ಅಕ್ಕನು ನೀಡಿದ ಉತ್ತರ. ಬಣ್ಣಗೆಟ್ಟ, ಹಣ್ಣಿನ ಸಿಪ್ಪೆ ಒಳಗಿನ ಪಕ್ವತೆಯ ಸಂಕೇತವಾಗಿರುವಂತೆ ತನ್ನ ನಗ್ನತೆಯು ಅಂತರಂಗದ ನಿರ್ವಾಣದ ಕುರುಹುದಾಗಿದ್ದರೂ ಲೋಕಭಾವಕ್ಕೆ ವಿಪರೀತವಾಗದಂತಿರಲು ಕೇಶಾಂಬರಿಯಾದುದನ್ನು ತಿಳಿಸುತ್ತಾಳೆ ಎಂಬುದನ್ನು ಈ ವಚನವು ವಿವರಿಸುತ್ತದೆ.

ಫಲ ಒಳಗೆ ಪಕ್ವವಾಗಿಯಲ್ಲದೆ ಹೊರಗನ ಸಿಪ್ಪೆ
ಓಪ್ಪಿಗೆಡದು ಕಾಮನ ಮುದ್ರೆಯ ಕಂಡು ನಿಮಗೆ
ನೊವದಿತೆಂದು ಆ ಭಾವದಿಂದ ಮುಚ್ಚಿದೆ
ಇದಕ್ಕೆ ನೋವೆಕೆ ಕಾಡದಿರಣ್ಣಾ
ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳು[೫]

ಅನುಭಾವದ ಬೇರೋಂದು ಸ್ತರದಲ್ಲಿ ಬದುಕುವ ತಾನು ಐಂದ್ರಿಯಿಕ ಮಿತಿಯನ್ನು ಕಳೆದುಕೊಂಡದ್ದನ್ನು ಚನ್ನಮಲ್ಲಿಕಾರ್ಜುನ ದೇವನ ಒಳಗಾದವಳೆನ್ನುವ ಮಾತಿನಲ್ಲಿ ಸೂಚಿಸುತ್ತ ತನಗೆ ಕಾಮ ಕ್ರೋಧಾದಿಗಳ ಭಾದೆ ಇಲ್ಲವೆಂದು ತನ್ನ ನಿಲುವನ್ನು ಸ್ಪಷ್ಟಪಡಿಸುತ್ತಾಳೆ.

**ಇಹಕ್ಕೊಬ್ಬ ಗಂಡನೆ? ಪರಕ್ಕೊಬ್ಬ ಗಂಡನೆ?**[೬] ಎನ್ನುವ ತಾತ್ವಿಕ ನೆಲೆಯ ಗೊಂದಲವನ್ನು ಒಪ್ಪದೇ ಇಹ –ಪರವೆರಡಕ್ಕೂ ಪರಮಾತ್ಮನನ್ನು ಆತ್ಮಸಂಗಾತಿಯಾಗಿಸಿಕೊಂಡ ಅಕ್ಕನ ವರ್ತನೆ ಸಮಕಾಲೀನ ವ್ಯವಸ್ಥೆಗೆ ಲೋಕವಿರೋಧಿಯಾಗಿ ಕಂಡಿದೆ. ಲೋಕ ಸಾಮಾನ್ಯ ಬದುಕಿಗೆ ಅವಾಸ್ತವವೆನಿಸುವ ವಿರಾಗಿಣಿ

ಅಕ್ಕನ ಅಸಹಜ ಆಯ್ಕೆಯು ಆಕೆಯ ಪಾರಮಾರ್ಥಿಕ ಸಾಧನೆಯನ್ನು ದುರ್ಗಮವಾಗಿಸಿದೆ. ಹೆಣ್ಣನ್ನು ದೇಹ ಕೇಂದ್ರಿತ ನೆಲೆಯಲ್ಲಿಯೇ ಪರಿಭಾವಿಸುವ ಮನಸ್ಸುಗಳು ಮಹಾದೇವಿಯಕ್ಕನನ್ನು ವಿಧವಿಧವಾಗಿ ಕಾಡಿವೆ. ಆಕೆಯ ಪಾರಮಾರ್ಥಿಕ ವ್ಯಕ್ತಿತ್ವವನ್ನು ಅರಿಯದೇ ಒಂಟಿ ಹೆಣ್ಣೆಂದು ಬೆನ್ನತ್ತಿ ಅಪಮಾನಿಸಿದ ವಾಸ್ತವವನ್ನು ಧೈರ್ಯ ವಿವೇಕದಿಂದ ಎದುರುಸಿದ ರೀತಿಯನ್ನು ನೋಡಬಹುದು.

ಗಿರಿಯಮ್ಮನ ರಚಿಸಿದಂತಹ ಶಂಕರಗಂಡನ ಹಾಡಿನಲ್ಲಿ ಶಿವನ ತಂಗಿ ರತಿಗೆ ಸಂಬಂಧಿಸಿದಂತೆ ಮನ್ಮಥ ಶಿವನಿಗೆ ಅಷ್ಟೊಂದು ಅವಳಿಗೆ ಸ್ವಾತಂತ್ರ್ಯವಿಲ್ಲವೇ? ನೀನು ಅನುಮಾನಿಸುವುದೇಕೆ? ನೀವು ನೆನೆದಾಗ ನಿಮ್ಮ ಮನೆಗೆ ಕಳಿಸುತ್ತೇನೆ[2], ಎಂದು ಹೆಣ್ಣಿನವರನ್ನು ನಂಬಿಸುವಂತೆ ಬೂಟಾಟಿಕೆಯ ಮಾತು, ಇದನ್ನು ಗಮನಿಸಿದರೆ ಹೆಣ್ಣು ಪುರುಷನ ಅಧೀನ, ಆತನ ಅನುಮತಿಯಿಲ್ಲದೇ ಏನೂ ಮಾಡಲಾರಳೆಂಬುದನ್ನು ಪುರುಷನ ಕಡೆಯವರಾದುದರಿಂದ ಅಧಿಕಾರಯುತವಾಗಿ ಹೇಳಬಲ್ಲವೆಂಬ ಧೋರಣೆಯನ್ನು ಗಮನಿಸಬಹುದು.

ಲವಕುಶರ ಕಾಳಗದಲ್ಲಿ ಸೀತೆಯನ್ನು ಪೂರ್ವಾಪರ ಯೋಚಿಸದೇ ಸ್ತ್ರೀ ನಿಂದನೆ ಮಾಡಿರುವಲ್ಲಿ ಹೆಣ್ಣು ಪ್ರಾಣಕಂಟಕ ಎಂಬ ಪುರುಷನ ಮನಸ್ಸಿನ ಧೋರಣೆ ವ್ಯಕ್ತವಾಗಿದೆ. ಇಲ್ಲಿಯ ರಾಮ ಮರ್ಯಾದಾಪುರುಷನಾಗಿ ಚಿತ್ರಿತವಾಗಿಲ್ಲ. ಆತನಿಗೂ ರಾಗದ್ವೇಷಗಳಿವೆ, ಸಂಶಯಪ್ರವೃತ್ತಿಯಿದೆ, ಎಂಬುದನ್ನು ಪುರುಷ ಮತ್ತು ಸ್ತ್ರೀಸಂಬಂಧಿ ನೆಲೆಗಳಿಂದ ಯೋಚಿಸಬಹುದಾಗಿದೆ.

ಅಕ್ಕನ ತುಮುಲತೆ. ಮಾನಸಿಕ ಅಸ್ವಸ್ಥತೆಯಂದೂ ಕಂಡುಬಂದರೂ ಮನಸ್ಸು ಮಾಯೆಯಾಗಿ ಕೆಲಸ ಮಾಡುತ್ತಿರುವುದನ್ನು ಗಮನಿಸಬಹುದು. ಅಕ್ಕ ಒಂದು ಕಡೆ ತನ್ನ **ಇಹ ಗಂಡನಾದವರನ್ನು ಲೋಕದ ಗಂಡರನ್ನು ಒಲೆಯೊಳಗಿಕ್ಕು** ಎಂದಿರುವುದು, ಮತ್ತೊಂದು ಕಡೆ **ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ಒಲಿದೆನವ್ವಾ,**[8] ಎಂಬ ಮಾತುಗಳನ್ನು ಗಮನಿಸಿದರೆ ಕಾಣದ ಅಥವಾ ಚಿತ್ರಿತ ವ್ಯಕ್ತಿಯನ್ನು ತನ್ನ ಗಂಡನೆಂದು ಮಿಕ್ಕಿರುವ ಗಂಡರನ್ನು ಸಹೋದರರಂತೆ ಕಾಣಲಾಗಿದೆ.

ಮಹಿಳೆಯರ ಬರವಣಿಗೆಯ ಕ್ರಮ, ಅವರು ಬಳಸುವ ಭಾಷೆ ಇತ್ಯಾದಿಗಳನ್ನು ಕೂಡ ಗಮನಿಸಬೇಕು. ಇದು ವಿಮರ್ಶಕರಿಗೂ ಅನ್ವಯಿಸುತ್ತದೆ. ಪುರುಷ ಕೇಂದ್ರಿತ ಸಂಸ್ಕೃತಿಯಲ್ಲಿ ಸ್ತ್ರೀಯರ ಮಾತುಕತೆಗಳನ್ನು ಬರಹಗಳನ್ನು ಒಂದು ರೀತಿಯ ಓತ್ತಡಕ್ಕೆ ಗುರಿಪಡಿಸಲಾಗುತ್ತದೆ. ಇದರಿಂದ ಅವರ ಭಾಷೆಯೂ ಕೂಡ ಪುರುಷರ ನಿರೀಕ್ಷೆಗೆ ಅನುಸಾರವಾಗಿ ರೂಪುಗೊಳ್ಳುತ್ತದೆ. ಯಾವುದನ್ನು ಉನ್ನತ ದರ್ಜೆಯ ಸಾಹಿತ್ಯವೆಂದು ನಾವು ಕರೆದಿದ್ದವೊ ಅದರಲ್ಲಿ ಹೆಣ್ಣಿನ ದೇಹದ ವಿವರ ಅವಳು ಗಂಡಿನೊಂದಿಗೆ ಇಟ್ಟುಕೊಳ್ಳುವ ಸಂಬಂಧದ ಮಾದರಿಗಳೇ ಚರ್ಚೆಗೆ ಗುರಿಯಾಗಿವೆ. ಆದರೆ ಅದು ಅಷ್ಟು ಮಾತ್ರವೇ ಅಲ್ಲ ತಾನೇ.

ಸ್ತ್ರೀಯರಾಗಲೀ ಪುರುಷರಾಗಲೀ ಯಾವತ್ತು ಅಧಿಕಾರದ ಸಂರಚನೆಯಿಂದ ಹೊರಗಿರುವುದಿಲ್ಲ. ಹೀಗಾಗಿ ಲೈಂಗಿಕ ರಾಜಕಾರಣದ ವಿಶ್ಲೇಷಣೆಯು ಅಂತಿಮವಾಗಿ ಅಧಿಕಾರದ ನಡುವಣ ಸಂಬಂಧವನ್ನು ನಿರ್ವಚಿಸುತ್ತದೆ. ಹಾಗೆಯೇ ಕೃತಿಯೊಳಗಿನ ಮತ್ತು ಕೃತಿಯ ಹೊರಗಿನ ಸ್ತ್ರೀಯೆಂಬ ಪರಿಕಲ್ಪನೆಗಳು ಭಿನ್ನ ಇವುಗಳ ಕ್ರಿಯಾತ್ಮಕ ಸ್ವರೂಪವೂ ಭಿನ್ನವಾಗಿವೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಲಿಂಗರಾಜಕಾರಣದ ನೆಲೆಯನ್ನು ಶೋಧಿಸಲು ಮತ್ತಷ್ಟು ಅವಕಾಶವಿದೆ.

## ಅಡಿ ಟಿಪ್ಪಣಿ

೧. ಡಾ॥ ಕೇಶವಶರ್ಮ ಕೆ, ಸ್ತ್ರೀವಾದಿ ಆಖ್ಯಾನ, ಸಾರಾ ಎಂಟರ್ ಪ್ರೈಸಸ್, ಮುದ್ರಣ, ೨೦೦೫, ಪುಟ: ೧೨೦
೨. ಡಾ॥ ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್, ೧೯೮೮, ಪುಟ: ೧೬೩
೩. ಅದೇ ಪುಟ: ೧೫೮
೪. ಎಚ್ ಎಸ್ ಶ್ರೀಮತಿ,ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬, ಪುಟ: ೧೯೪
೫. ಅದೇ ಪುಟ: ೭೫
೬. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೭೦
೭. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೩೧
೮. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೧೩೯

**೪)ಮಾನವತವಾದಿ ಆಶಯ:-**

ಬಂಜೆ ಬೇನರಿಯದವಳೇ
ಬಲದಾಯಿ ಮುದ್ದ ಬಲ್ಲಳೆ
ನೊಂದ ನೋವ ನೋಯದವರೆತ್ತ
ಚನ್ನಮಲ್ಲಿಕಾರ್ಜುನನಿರಿದಲಗು ಒಡಲಲ್ಲಿ ಮುರಿದು
ಹೊರಳುವೆನ್ನಳಲನು ನೀವೆತ್ತಬಲ್ಲರೇ ಎಲೆತಾಯಿಗಳಿರಾ?[7]

ನಿಜ ಭಕ್ತಿಯ ಪರಕಾಯತ್ವವನ್ನು ಪ್ರವೇಶಿಸಲು ಪೊಳ್ಳು ಮಾತಾನಾಡುವವರಿಗೆ ಸಾಧ್ಯವಿಲ್ಲ. ಅನುಭವದ ಮಹತ್ವವನ್ನು, ಅನುಭವಿಸಿದವರಿಗೆ ಮಾತ್ರ ತಿಳಿಯುತ್ತದೆ, ಎಂಬುದನ್ನು ತನ್ನ ವಚನದಲ್ಲಿ ಸ್ಪಷ್ಟಪಡಿಸಿದ್ದಾಳೆ.

ಜೀವನಾನುಭವ ಉತ್ಕಟ ಭಾವಪರಿಸ್ಥಿತಿಯನ್ನು ಹಾಡಾಗಿಸಿದ ಮಹಿಳೆಯರ ಸೃಜನಶೀಲತೆ, ಕಾವ್ಯಪ್ರತಿಭೆ, ಕಲ್ಪಕಶಕ್ತಿ, ಬೌದ್ಧಿಕಶಕ್ತಿಯನ್ನು ಉಪಯೋಗಿಸಿ ಬರೆದಂತಹ ಸಾಹಿತ್ಯ ವಚನಸಾಹಿತ್ಯವಾಗಿದೆ. ಆಶ್ರಯದಾತರ ಹಂಗಿಲ್ಲದೇ ಅಕ್ಷರಜ್ಞಾನ ಹೊಂದಿದವರು ಆಗಿದ್ದಾರೆ. ಮೌಖಿಕ ರಚನೆಗಳಲ್ಲಿ ತನ್ನ ವೇದನೆ ಸಂವೇದನೆಯ ಸಮೃದ್ದ ಭಾವ ಪ್ರಪಂಚವನ್ನು ಸೂರೆಗೊಂಡಿರುವ ಕನ್ನಡತಿಯರು ಸುಧೀರ್ಘ ಆವಧಿಯವರೆಗೆ ಶಿಷ್ಟ ಪರಂಪರೆಯ ಸಾಹಿತ್ಯದಿಂದ ದೂರವಾಗುಳಿದಿರುವುದು ಅಸಹಜ ಬೆಳವಣಿಗೆಯಾಗಿದೆ. ಮೌಖಿಕ ಸಾಹಿತ್ಯ ಪರಂಪರೆಯನ್ನು ಉಜ್ವಲಗೊಳಿಸಿದ ಸ್ತ್ರೀಪ್ರತಿಭೆಗೆ ಮನ್ನಣೆ ತಪ್ಪಿಹೋಗಿ ಅಕ್ಷರಾಭಿವ್ಯಕ್ತಿಯೇ ಅಸ್ತಿತ್ವ ಗಟ್ಟಿನೆಲೆಯಾಗಿ ಪರಿಗಣಿತವಾದುದು ಸಾಂಪ್ರದಾಯಿಕ ಶಿಷ್ಟ ಚರಿತ್ರೆಯ ವಿಪರ್ಯಾಸವಾಗಿದೆ. ಮಧುರಭಕ್ತಿ ಸಾಧಕಳಾದ ಮಹಾದೇವಿಯಕ್ಕ ಸ್ತ್ರೀವಿರೋಧಿ ವಾಸ್ತವದ ವೈರುದ್ಯಗಳೊಂದಿಗೆ ಮುಖಾಮುಖಿಯಾಗುತ್ತಲೇ ಲೋಕೊತ್ತರವಾದ ಬೆಳೆದ ಅಪ್ರತಿಮ ಸಾಧಕಿ. ಶ್ರೇಷ್ಟ ಅನುಭಾವಿಯಾಗಿ ಹೆಣ್ಣಿನ ಸ್ವಾತಂತ್ರ್ಯದ ಸಾಧನೆಯ ಹೆಣ್ಣಿನ ಪಾರಮಾರ್ಥ ಸಾಧನೆಯ ಒಂದು ಮಹಾಪ್ರಕರಣವಾಗಿ ಇತಿಹಾಸವನ್ನು ನಿರ್ಮಿಸಿದ್ದಾಳೆ. ಮಹಿಳೆಯರ ಸ್ವಾನುಭವ ಸಾಮಾಜಿಕ ಪ್ರಜ್ಞೆ ಮತ್ತು ಕಾವ್ಯಪ್ರತಿಭೆಯ ನಿದರ್ಶನಗಳಾಗಿರುವ ವಚನಗಳು ಅವರ ಅಂತರಂಗದ ಸಾಧನೆ, ಶೋಧನೆ ಮತ್ತು ಜೀವಾನಾನುಭವದ ವೈವಿಧ್ಯವನ್ನು ಒಳಗೊಂಡಿದೆ. ಸುಪರಿಚಿತ ವಸ್ತು ವಿವರಗಳ ಮೂಲಕ ಅಭಿವ್ಯಕ್ತಿಸಿರುವಲ್ಲಿಯೂ ವಚನಕಾರ್ತಿಯರ ಮತ್ತು ಕೀರ್ತನಕಾರರ ಸ್ತ್ರೀ ವಿಶಿಷ್ಟತೆಯ ಛಾಪು ಕಂಡುಬರುತ್ತದೆ. **ತಾಯಿ ನೊಂದರೆ ಒಡಲಶಿಶು ನೋವ ತೆರನಂತೆ, ಬಂಜೆ ಬೇನರಿಯದವಳು ಬಲತಾಯಿ ಮುದ್ದುಬಲ್ಲಳೇ, ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ ಬಲ್ಲವರ ಸಂಗ –ಅಕ್ಕಮಹಾದೇವಿ. ಆಸೆಯೆಂಬುದು ಬಿಡದು ಈ ಭುವನದೊಳ್ ಲೇಸುಗಾಣೆನು ಹರಿಯೆ, ಅನ್ಯರ ಗುಣದೋಷವ ಎಣಿಸದಲೆ ನಿನ್ನಿರವ ನೋಡು ಕಂಡ್ಯ ಮನವೆ–ಹೆಳವನಕಟ್ಟೆ ಗಿರಿಯಮ್ಮ**, ಎಂಬ ಮಾತುಗಳು ವಿವೇಕವನ್ನು ಹೇಳುತ್ತದೆ.

ಅಕ್ಕಮಹಾದೇವಿಯ ಸೃಷ್ಟಿಯ ವಚನವು ವಿಶ್ವ ಸೃಷ್ಟಿಯ ಹಿನ್ನಲೆಯಲ್ಲಿ ಮನುಷ್ಯ ಸೃಷ್ಟಿಯ ರಹಸ್ಯವನ್ನು ನಿರೂಪಿಸುವ ಶಾಸ್ತ್ರ ಸಾಹಿತ್ಯವಾಗಿದೆ. ಯೋಗಾಂಗ ತ್ರಿವಿಧಿ ಮಹಾದೇವಿಯಕ್ಕನ ಶಿವಯೋಗ ಸಿದ್ದಿಯನ್ನು ಕಾವ್ಯ ಪೂರ್ಣವಾಗಿಸಿ ನಿರೂಪಿಸಿರುವ ತ್ರಿಪದಿ ಕಾವ್ಯ, ಅಕ್ಕನ ಸ್ವರವಚನಗಳು ಧರ್ಮತತ್ವ ಅನುಭಾವದ ಸಂಗತಿಗಳನ್ನು ಸಾಂಕೇತಿಕ ಪರಿಭಾಷೆಯಲ್ಲಿ ಪ್ರತಿಪಾದಿಸುವ ತತ್ವ ಪದಗಳು ಆಗಿವೆ. ಅವು ಹೀಗಿವೆ. ಪರತತ್ವದ ಬಗ್ಗೆ ಮಾಣದಚ್ಚ ಜಲದೊಳೊಂದು ಅಣಿಯಾದ ಮುತ್ತು ಹುಟ್ಟಿ

ಕೋಣೆಯವರೊಳಗೆ ತಾನೇ ತಿರುಗುವುದು, ಅಣಿಕಾರರು ಕಂಡು ಆ ಮುತ್ತ ಬೆಲೆ ಮಾಡಿ ಜಾಣತನದಲಿ ಕಂಡೊಯ್ದರದನು, ಎನ್ನುವ ಸುಂದರ ಶಬ್ದಚಿತ್ರವಾಗಿ ಅರಳಿದೆ.

ಅಸಮಾನತೆ ಅನ್ಯಾಯ ಅಪಮಾನದ ಮೂಕವೇದನೆಯಲ್ಲಿ ಮುಳುಗಿದ್ದ ದೀನ ದಲಿತರು ಪತಿತರು ಹೊಸಹುಟ್ಟು ಪಡೆದುಕೊಂಡರೆನ್ನುವುದು ಶರಣರ ಕ್ರಾಂತಿಯ ಅನನ್ಯ ಸಾಧನೆಯಾಗಿರುವಂತೆಯೇ ಪುರುಷ ಪ್ರಧಾನ ಬೌದ್ಧಿಕ ಪ್ರಪಂಚದಲ್ಲಿ ಮಹಿಳೆಯರ ಅಸ್ತಿತ್ವವು ದಾಖಲಾದುದು.

ಕರ್ನಾಟಕದಲ್ಲಿ ೧೨ ನೇ ಶತಮಾನದಲ್ಲಿ ವಚನಾಂದೋಲನದ ಸಮಾಜದ ಸ್ವಾಸ್ಥ್ಯವನ್ನು ಧರ್ಮದ ಸಹಜ ಸರಳ ಧ್ಯೇಯ ಧೋರಣೆಗಳನ್ನು ಪುನರ್ ಸ್ಥಾಪಿಸಲು ನಡೆದದ್ದು, ಅಧಿಕಾರ, ಧರ್ಮ ದಬ್ಬಾಳಿಕೆ, ವರ್ಗ ವರ್ಣಗಳ ತುಳಿತದಿಂದ ತತ್ತರಿಸಿದ್ದ ಆತ್ಮ ನಿರ್ಭರತೆಯನ್ನು ಕಳೆದುಕೊಳ್ಳುತ್ತ ಬಂದಿದ್ದ ಅಂದಿನ ಕೆಳಸ್ತರದ ಸಮುದಾಯಕ್ಕೆ ವಚನಕಾರರು ಸ್ವಾಭಿಮಾನ ಸ್ವಾತಂತ್ರ್ಯ, ಆತ್ಮವಿಶ್ವಾಸ, ಕಾಯಕ ಗೌರವ ಸಹಜ ಬದುಕನ್ನು ತಂದುಕೊಟ್ಟರು. ವ್ಯಕ್ತಿಸಮಾಜದ ಅವಿನಾಸಂಬಂಧಗಳ ಆತ್ಮನಿರೀಕ್ಷೆಗೆ ಅ ಮೂಲಕ ಪ್ರೇರಣೆಯಿತ್ತು ಪರಸ್ಪರರನ್ನು ತಿದ್ದಿಕೊಳ್ಳಲು ಸಮಾಜದ ಸಮರ್ಥ ಘಟಕಗಳಾಗಿ ಬಾಳಲು ಕಲಿಸಿಕೊಟ್ಟರು.

ಅಕ್ಕಮಹಾದೇವಿಯ ವಚನಗಳಲ್ಲಿ ಸಮಾಜವನ್ನು ಕುರಿತ ಆಲೋಚನೆಗಳನ್ನು ಸಂಸಾರದ ಸಂಬಂಧವೊಂದರಲ್ಲಿಯೇ ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಏಕೆಂದರೆ ಅವಳ ಎಲ್ಲ ವಚನಗಳು ಮುಖ್ಯವಾಗಿ ಸಂಸಾರದ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡಂಥವುಗಳು. ಸಂಸಾರದ ರಚನೆಯನ್ನು ರೂಪಿಸಿರಬಹುದಾದ ಅನೇಕ ರೀತಿಯ ವ್ಯಕ್ತಿಗಳ ಸಂಬಂಧಗಳು ಮತ್ತು ಈ ಸಂಬಂಧಗಳಲ್ಲಿ ಹೊರಹೊಮ್ಮುವ ಕ್ರಿಯೆಯ ಸ್ವರೂಪಗಳು ಅಕ್ಕಮಹಾದೇವಿಯ ವಚನಗಳ ಲಕ್ಷಣಗಳು ಬೆಳೆಯುತ್ತವೆ.

ಹಾವಿನ ಬಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸು ಕಂಡಯ್ಯ
ಕಾಯದ ಸಂಗವ ವಿವರಿಸಬಲ್ಲಡೆ
ಕಾಯದ ಸಂಗವೆ ಲೇಸು ಕಂಡಯ್ಯ
ತಾಯಿ ರಕ್ಕಸಿಯಾದಂತೆ ಕಯವಿಕರವು
ಚನ್ನಮಲ್ಲಿಕಾರ್ಜುನಯ್ಯ
ನೀನೊಲಿದವರು ಕಯಗೊಂಡಿದ್ದರೆನಬೇಡ[೨]



ಮಹಾದೇವಿಯಕ್ಕನ ಭಕ್ತಿ ಭಾವನಿರ್ಭರತೆ, ತನ್ಮಯತೆ, ಆಕೆಯ ಅಭಿವ್ಯಕ್ತಿಯನ್ನು ವಿಶಿಷ್ಟವಾಗಿದೆ. ಸಾಲುಸಾಲು ಉಪಮೆಗಳು ಅರ್ಥಪೂರ್ಣ ಪ್ರತಿಮೆಗಳು ವಚನಗಳ ಭಾವಸಂಪತ್ತನ್ನು ದ್ವಿಗುಣಗೊಳಿಸಿವೆ. ದೇಹ ಧರ್ಮಗಳ ಪ್ರಾಕೃತಿಕ ಮಿತಿಗಳನ್ನು ಮೀರಲೆತ್ನಿಸುವ ಸಂಕೀರ್ಣತೆಯನ್ನು ಹಾವಾಡಿಗನ ಹಾವಿನ ಸ್ನೇಹ, ತಾಯಿ ರಕ್ಕಸಿಯ ಪ್ರತಿಮೆಗಳು ದೃಶ್ಯೀಕರಿಸಿರುವ ವಿಧಾನ ಪರಿಣಾಮಕಾರಿಯಾಗಿದೆ.

ಯಾತಕೆ ಮರುಳಾದಿ ಹೀಂಗೆ ಎಲೆಮನವೆ
ಕಾಕುಬುದ್ಧಿಯ ಬಿಡು ಬಿಡು ಸುಮ್ಮನೆ ಎಲೆ ಮನವೆ
ಕಾಗೆಯ ಕಯ್ಯ ಕೋಗಿಲೆಯಂತೆ ನಗಳು ನೀರಾಗೆ ಗಜವ ಪಿಡಿದಂತೆ
ಲಾಗಿಸಿ ಪಶುವ ವ್ಯಾಘ್ರನು ಪಿಡಿದಂದದಿ ಕೂಗುತಿರ್ದನು ಬಾಲಕನು[೩]

ಮಳೆಯ ದಯಮಾಡೊ ರಂಗಯ್ಯ ನಿಮ್ಮ

ಕರುಣ ತಪ್ಪಿದರೆ ಉಳಿಯದೀ ಲೋಕ[೪]

ಗಿರಿಯಮ್ಮ ಮನುಷ್ಯನಿಗೆ ಸಂಬಂಧಿಸಿದ ಮಾತನ್ನು ಹೇಳುತ್ತಾಳೆ. ನೀಚತನವನ್ನು ಬಿಟ್ಟು ಒಳ್ಳೆಯ ಚಿಂತನೆಯನ್ನು ಮಾಡು, ಯಾಕೆ ಈ ಕೆಟ್ಟ ಆಲೋಚನೆಯನ್ನು ಮಾಡುತ್ತೀಯಾ? ಎಂದು ಗಿರಿಯಮ್ಮ ಹೇಳುತ್ತಾಳೆ. ಇನ್ನೊಂದು ಕೀರ್ತನೆಯಲ್ಲಿ ಚಂದ್ರಹಾಸನ ಕಥೆಯಲ್ಲಿ ಕಂಡುಬರುವ ಒಂದು ಸನ್ನಿವೇಶದ ವರ್ಣನೆಯನ್ನು ನೋಡಬಹುದು

ಗಿರಿಯಮ್ಮಳು ಮಳೆಯಿಲ್ಲದೇವ ಪ್ರಾಣಿ ಪಕ್ಷಿ ಗಿಡಮರಗಳು ಬಡಿರುವ ಪರಿಸ್ಥಿತಿಯನ್ನು ಅಕ್ಕ ನೋಡಲಾರದೆ ತನ್ನ ದೈವವಾದ ರಂಗಯ್ಯನಲ್ಲಿ ತನ್ನ ಭಿನ್ನಪವನ್ನು ಸಲ್ಲಿಸಿದ್ದಾಳೆ.

ಗಿರಿಯಮ್ಮಳು ತನ್ನ ಸುತ್ತಮುತ್ತಲಿನ ಜನರಿಗೆ ಉಪಕಾರಿಯಾಗಿ ದೈವಿಕ ಸ್ವರೂಪಿಯಾಗಿ ಸಮಾಜಕಾರ್ಯ ಕೆಲಸವನ್ನು ಮಾಡಿದಂತಹವಳು

ಚಂದನವ ಕಡಿದು ಕೊರೆದು ತೇದೊಡೆ

ನೊಂದನೆಂದು ಕಂಪ ಬಿಟ್ಟಿತೇ

ತಂದು ಸುವರ್ಣವ ಕಡಿದೊರೆದೊಡೆ ಬೆಂದು ಕಳಂಕ ಹಿಡಿದಿದ್ದೆ?

ಸಂದುಸಂದನು ಕಡಿದು ಕಬ್ಬನು ತಂದು ಗಾಣದಲಿಕ್ಕೆ ಅರೆದಡೆ

ಬೆಂದು ಪಾಕಗೊಳ ಸಕ್ಕರೆಯಾಗಿ ನೊಂದನೆಂದು ಸವಿಯ ಬಿಟ್ಟೀತೆ

ನಾಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು

ನಿಮಗೆ ಹಾನಿ

ಎನ್ನ ತಂದೆ ಚನ್ನಮಲ್ಲಿಕಾರ್ಜುನದೇವಯ್ಯ

ಕೊಂದೊಡೆ ಶರಣಂಬುದ ಮಾಣೆ[೫]

ಅಕ್ಕಮಹಾದೇವಿ ತನ್ನ ವಚನಗಳಲ್ಲಿ ಮನುಷ್ಯ ತನ್ನ ಜೀವನ ಶೈಲಿಯಲ್ಲಿ ಹೇಗೆ ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕು ಎಂಬ ಅಂಶವನ್ನು ಮತ್ತು ನೀತಿ ನಿಯಮಗಳನ್ನು ತನ್ನ ವಚನಗಳಲ್ಲಿ ತರ್ಕಿಸಿದ್ದಾಳೆ.

ಲೌಕಿಕ ಜಗತ್ತಿನ ಸ್ನೇಹ ಸಂಬಂಧಗಳನ್ನೆಲ್ಲಾ ನಿರಾಕರಿಸಿದ ಕಾರಣವಾಗಿ ಮಹಾದೇವಿಯಕ್ಕ ಅನ್ನ, ನೀರು ಆಶ್ರಯಗಳಿಗಿಂತಲೂ ವಂಚಿತಗಳಾಗಬೇಕೆನ್ನುವ ಎದುರಿಸಿದ್ದಾಳೆ. **ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದೆಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.** ಸಂಯಮ, ಸ್ಥಿತ ಪ್ರಜ್ಞೆಯನ್ನು ಸಾರಿದ್ದಾಳೆ.

ಅಂತರಂಗದಲ್ಲಿ ಅರಿವನ್ನು ಜಾಗೃತಗೊಳಿಸಿ ಭವಬಂಧನ ಬಿಡಿಸಿದ ಸದ್ಗುರುವಿನ ಕರುಣೆಯು ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ, ಬರಲುಗೊಂಡ ಸನಗೆ ಮಳೆಸುರಿದಂತೆ, ಅಪ್ಯಾಯಮಾನವಾಗಿದೆ. ಭಕ್ತಿಸಾಧನೆಯು ಬಲ್ಲಿದನು ಹಗೆಹ ತೆಗೆವೆನ್ನ ಬರ ಬಡತನ ಹರಣಹೋದ ತೆರನಂತೆ. ನಿಷ್ಟುರವಾದದು..ಅಂತರಾತ್ಮವನ್ನರಿಯದ ಅಜ್ಞಾನದ ಸ್ಥಿತಿಯು ಅಗಸ ನೀರಳಗಿರ್ದು ಬಾಯಾರಿ

ಸತ್ತಂತೆ.ಚಿಂತಾಜನಕವಾದದು.ಇಷ್ಟಲಿಂಗವ ಕಡೆಗಣಿಸಿ ಅನ್ಯದೈವಕ್ಕೆ ಅಲೆದಾಡುವುದು ಹಾಲ ಹಿಡಿದು ಬೆಣ್ಣೆಯನರಸುವಂತೆ, ಹಾಸ್ಯಾಸ್ಪದವಾದುದು. ಇತ್ಯಾದಿ ಅನೇಕ ಅರ್ಥಭರಿತ ಸೂತ್ರೋಕ್ತಿ, ಅನುಭವೋಕ್ತಿಗಳ ಮೂಲಕ ಜೀವಾನಾನುಭವವನ್ನು ಕೆನೆಗಟ್ಟಿಸಿರುವಲ್ಲಿ ಮಹದೇವಿಯಕ್ಕನ ಕಾವ್ಯಕಲೆ ಜೀವನದರ್ಶನದ ಸತ್ವಸಾರವಿದೆ.

ನಂಬದ ಆದರ್ಶಕ್ಕಾಗಿ ನಿರಂತರವಾಗಿ ಹಂಬಲಿಸುತ್ತ ಬದುಕಿನ ಬಿಸಿಲು ಬೆಳದಿಂಗಳನ್ನು ಕಾವ್ಯವಾಗಿಸಿದ್ದು ಅಕ್ಕನ ಅನನ್ಯ ಸಾಧನೆ, ವಚನಾಭಿವ್ಯಕ್ತಿಯ ಅಪೂರ್ವ ಸಾಧನೆ. ಭಾವಭಾಷೆಯ ಸಿದ್ದಿಯನ್ನು ಕುರಿತಂತೆ ಅಕ್ಕನ ಪ್ರತಿಭೆ ಉನ್ನತವಾಗಿದೆ. ಗಿರಿಯಮ್ಮ ತನ್ನ ಹಾಡುಗಳ ಮೂಲಕ ಸಮಾಜದ ಅಂಕುಡೊಂಕುಗಳನ್ನು ಆಚಾರವಿಚಾರಗಳ ಖಂಡಿಸುತ್ತಾ ಜನರಿಗೆ ದೈವಿಕ ಮೂರ್ತಿಯಾಗಿ ಪವಾಡಮೂರ್ತಿಯಗಿ ಜನಸಾಕರ ಮೂರ್ತಿಯಾಗಿ ಗಿರಿಯಮ್ಮ ಮೆರೆದಿದ್ದಾಳೆ.

**ಅಡಿ ಟಿಪ್ಪಣಿ**

೧. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೧೫೫

೨. ಡಾ॥ ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್, ೧೯೮೮, ಪುಟ: ೧೫೬

೩. ಎಚ್ ಎಸ್ ಶ್ರೀಮತಿ,ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬, ಪುಟ: ೧೯೩

೪. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೨೬

೫. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೫೯

## ೫)ಮೌಲ್ಯಾಧಾರಿತ ಶಿಕ್ಷಣ:-

ಒಬ್ಬ ವ್ಯಕ್ತಿಯು ಸಮಾಜದಲ್ಲಿ ಒಬ್ಬ ಉತ್ತಮ ನಾಗರಿಕನಾಗಿ ಬೆಳೆಯಲು ಆತನ ಸಮಾಜ ಜೀವನಕ್ಕೆ ನೆರವಾಗಬಲ್ಲ ಸಾಮಾರ್ಥ್ಯ, ಕೌಶಲ ಮನೋಭಾವ ಮತ್ತು ಇತರ ವರ್ತನೆಗಳನ್ನು ರೂಢಿಸಿಕೊಳ್ಳಲು ನೆರವಾಗುವ ಒಂದು ಪರಿಣಾಮಕಾರಿ ಮಾಧ್ಯಮ ಶಿಕ್ಷಣ. ವ್ಯಕ್ತಿಯ ವ್ಯಕ್ತಿತ್ವ ಬೆಳೆವಣಿಗೆಯ ಮೂಲಕ ಸಮಾಜದ ಅಭಿವೃದ್ಧಿ, ಸಮಾಜದ ಪ್ರಗತಿಯ ಮೂಲಕ ರಾಷ್ಟ್ರದ ಅಭಿವೃದ್ಧಿಯ ದೃಷ್ಟಿಕೋನ ಶಿಕ್ಷಣದದ್ದಾಗಿದೆ. ಶಿಕ್ಷಣವು ತನ್ನ ಗುರಿಗಳಲ್ಲಿ ರಾಷ್ಟ್ರೀಯ ಅಭಿವೃದ್ಧಿಯ ವ್ಯಾಪಕ ದೃಷ್ಟಿಕೋನವನ್ನು ಹೊಂದಿರುತ್ತದೆ.

ಪ್ರಾಚೀನ ಕಾಲದಲ್ಲಿ ಭಾರತದಲ್ಲಿ ಸ್ತ್ರೀಸ್ವಾತಂತ್ರ್ಯ ಸಮಾನತೆ ಶಿಕ್ಷಣದ ವಿಷಯದಲ್ಲಿ ಪುರುಷರಿಗೆ ಸರಿಸಮಾನವಾಗಿ ಅವಕಾಶಗಳಿರಲಿಲ್ಲ. ವೇದಕಾಲದಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನಮಾನವಿದ್ದರೂ ನಂತರದಲ್ಲಿ ಆರ್ಷ ಮಹಾಕಾವ್ಯ, ಸ್ಮೃತಿಕಾಲಗಳಲ್ಲಿ, ಸ್ತ್ರೀಸ್ವಾತಂತ್ರ್ಯ, ಶಿಕ್ಷಣಗಳಿಗೆ ಧಕ್ಕೆಯುಂಟಾಗಿ ಸ್ತ್ರೀ ಮೂಲೆಗುಂಪಾದಳು. ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ, ಎಂದು ಹೇಳಲಾಗಿದೆ, ಎನ್ನುತ್ತಲೇ 'ಈಗ ನಮಗೆ ಸ್ವಾತಂತ್ರ್ಯ ಕೊಡಿ. ಎಂಬುದಾಗಿ ಸ್ತ್ರೀಕುಲ ಆಂದೋಳನವನ್ನೇ ಎಬ್ಬಿಸಿದೆ. ದಿನದಿಂದ ದಿನಕ್ಕೆ ಸ್ತ್ರೀಯರ ಮೇಲಿನ ದೌರ್ಜನ್ಯ, ಹಿಂಸೆ, ಅತ್ಯಾಚಾರಗಳು ಹೆಚ್ಚಾಗುತ್ತಲೇ ಚಳುವಳಿಗಳು ಹೆಚ್ಚಾಗುತ್ತಿವೆ. ಇದು ಭಾರತದ ಸಂಸ್ಕೃತಿಯ ಮೇಲೆ ನೇರವಾಗಿ ಪ್ರಭಾವ ಬೀರುತ್ತದೆ. ಯಾಕೆಂದರೆ ಇಂದಿನ ಕಾಲಕ್ಕೆ ಈ ಶಿಕ್ಷಣದ ಮೌಲ್ಯದ ಬಗ್ಗೆ ಅಧ್ಯಯನ ಕೈಗೊಳ್ಳಲು ಶಿಕ್ಷಣ ಎಂಬುದು ಸಂಸ್ಕೃತಿಯ ಮನೊಭಾವಕ್ಕೆ, ಮೌಲ್ಯಪ್ರಜ್ಞೆಗೆ ಸಂಬಂಧಪಟ್ಟದಾಗಿದೆ.

ಮಧ್ಯಯುಗದಲ್ಲಿ ಸ್ತ್ರೀಶಿಕ್ಷಣ ಸ್ಥಿತಿಗತಿಗಳ ಬಗ್ಗೆ ಒಮ್ಮೆ ಅವಲೋಕಿಸುವುದಾದರೆ ಮುಸ್ಲಿಂರ ಆಕ್ರಮಣದ ಸಂಪತ್ತಿನ ಜೊತೆಗೆ ಸ್ತ್ರೀಯರು ದಾಸಿಯರೆಂದು ಅಪಹರಿಸಲ್ಪಡುತ್ತದ್ದರು. ಅಪಹೃತ ಸ್ತ್ರೀಯರಿಗೆ ಯಾವುದೇ ರೀತಿಯ ಸ್ಥಾನಮಾನಗಳಿರಲಿಲ್ಲ. ಅಂಥವರನ್ನು ಹೇಗೆ ಮರಳಿ ಹಿಂದೂ ಸಮಾಜಕ್ಕೆ ಬರಮಾಡಿಕೊಳ್ಳಬೇಕೆಂಬುದರ ಬಗ್ಗೆ ವಿಚಾರ ವಿಮರ್ಶೆಗಳು ನಡೆದವು.

ಪರಕೀಯ ದಾಳಿಕೋರರ ಅಪಮಾನಗಳನ್ನು ಎದುರಿಸಬೇಕಾದ ಪರಿಸ್ಥಿತಿ ಭಾರತೀಯ ಸ್ತ್ರೀಯ ಜೀವನದಲ್ಲಿ ಆಗ ಸಾಮಾನ್ಯವಾಯಿತು. ಇದರಿಂದ ತನ್ನ ಮಾನ ರಕ್ಷಣೆಗಾಗಿ ಮನೆಯನ್ನೇ ಆಶ್ರಯಿಸಬೇಕಾಯಿತು. ಇದರ ಪರಿಣಾಮವಾಗಿ ಸ್ತ್ರೀಯರು ಸಾಮಾಜಿಕ, ಧಾರ್ಮಿಕ, ರಾಜಕೀಯ ಮುಂತಾದ ಚಟುವಟಿಕೆಗಳಿಂದ ದೂರವಾಗಿ ಕೇವಲ ಗೃಹಕೃತ್ಯಗಳಲ್ಲಿ ತೊಡಗುವ ಪರಿಸ್ಥಿತಿ ಬಂದೊದಗಿತು.

ಮುಸ್ಲಿಂ ದಾಳಿಗಳು ಆಗ ಸಿಂಧ್ ಪ್ರಾಂತದ ಮೇಲೆ ಪ್ರಾರಂಭವಾಗಿ ಉತ್ತರಭಾರತದಲ್ಲಿಯೇ ಮುಂದುವರೆದ್ದರಿಂದ ದಕ್ಷಿಣ ಭಾರತದಲ್ಲಿ ಸ್ತ್ರೀಶಿಕ್ಷಣಕ್ಕೆ ಅಷ್ಟೊಂದು ಧಕ್ಕೆ ಬರಲಿಲ್ಲ[7]. ಆದ್ದರಿಂದ ಕರ್ನಾಟಕದಲ್ಲಿ ಅತ್ತಿಮಬ್ಬೆಯರಂತಹ ಸುಶಿಕ್ಷಿತ ಸ್ತ್ರೀಯರಿದ್ದರು. ಮುಂದಿನ ಕಾಲಗಳಲ್ಲಿ ಅಕ್ಕಮಹಾದೇವಿ, ಸಂಚಿಹೊನ್ನಮ್ಮ, ಬಿದನೂರು ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಕಿತ್ತೂರು ಚೆನ್ನಮ್ಮರಂತಹ ಮಹಿಳೆಯರು ಮಿಂಚಿ ತಮ್ಮ ಉಜ್ವಲ ಆದರ್ಶವನ್ನು ಕನ್ನಡ ನಾಡಿಗೆ ಕೊಟ್ಟು ಹೋಗಿದ್ದನ್ನು ಮರೆಯಲು ಸಾಧ್ಯವಿಲ್ಲ. ಅಂದರೆ ಯಾವ ಕಾಲದಲ್ಲಾದರೂ ಎಂತಹ ಸಾಮಾಜಿಕ ರಾಜಕೀಯ ಪರಿಸ್ಥಿತಿಯಲ್ಲಾದರೂ ಸ್ತ್ರೀ ಶಿಕ್ಷಣದ ಮಹತ್ವದ ಅರಿವು ಸಮಾಜಲ್ಲಿತ್ತು ಎಂಬುದು ಇಲ್ಲಿ ಸಾಬೀತಾಗುತ್ತದೆ.

ತದನಂತರ ೧೨ ನೇ ಶತಮಾನದಲ್ಲಿ ಸ್ತ್ರೀಯರ ಶಿಕ್ಷಣದ ಪರಿಸ್ಥಿತಿ ಲಿಂಗತಾರತಮ್ಯ ಮಾಡುವುದು ಅಲ್ಲದೇ ಪಿತೃಪ್ರಧಾನ ಸಮಾಜದಲ್ಲಿ ಯಾವ ವ್ಯವಸ್ಥೆಯೂ ಈ ಗುಣದಿಂದ ಹೊರತಾಗಿರುವುದನ್ನು ಕಲ್ಪಿಸಲಾಗದು. ವಿದ್ಯಾಭ್ಯಾಸ ಎಂದರೆ ಗಂಡುಮಕ್ಕಳಿಗೆ ಎಂದೇ ಅರ್ಥ, ಸಕಲ ವಿದ್ಯೆಗಳೂ, ಶಾಸ್ತ್ರಗಳೂ, ಗಂಡು ಬದುಕನ್ನು ಪರಾಮರ್ಶನ ಬಿಂದುವನ್ನಾಗಿಟ್ಟುಕೊಂಡೆ ಸೃಷ್ಟಿಗೊಂಡಿದೆ. ಸಮಾಜದಲ್ಲಿ ಹೆಣ್ಣಿಗೆ ಕಲಿಯುವ ಜ್ಞಾನಿಯಾಗುವ ಅವಕಾಶಗಳಿಲ್ಲ, ಅಡಿಗೆ, ಶಿಶುಪಾಲನೆ, ಮನೆವೈದ್ಯ, ಗೃಹಾಲಂಕಾರ, ಹಾಡು ಹಸೆಗಳಂತಹ ಕೆಲವು ಕಲಿಕೆಗಳು ಅವಳಿಗಾಗಿಯೇ ವಿಶೇಷವಾಗಿ ರೂಪಿತವಾಗಿವೆಯೇನೂ ಹೌದು. ಆದರೆ ಈ ಕಲಿಕೆಯೇನೂ ಅವಳ ಸ್ವಂತದ ವಿಕಸನದ ಹಾದಿಗಳಲ್ಲ ಬದಲಿಗೆ ಗಂಡು ಬದುಕಿಗೆ ಒಂದು ಪರಿಕರವಾಗಿ ಒದಗಬೇಕಾದ ಅವಳ ಸಾಮಾಜಿಕ ಪಾತ್ರವನ್ನು ಪೋಷಿಸುವ ವಿಧಾನವನ್ನೇ ಪ್ರಾಚೀನ ಕಾಲದಲ್ಲಷ್ಟೆ ಅಲ್ಲ, ಇಂದಿನ ಕಾಲಕ್ಕೂ ನಮ್ಮ ಶಿಕ್ಷಣ ವ್ಯವಸ್ಥೆಯು ಈ ಮಾದರಿಯನ್ನೆ ಜಾರಿಯಲ್ಲಿಟ್ಟಿದೆ ಎಂಬುದನ್ನು ಕಾಣುತ್ತಿದ್ದೇವೆ. ಶಿಕ್ಷಣ ಎಂಬುದು ಹೆಣ್ಣು ಮಕ್ಕಳಿಗೆ ದುರ್ಲಭವೆನಿಸುಬಿಡುತ್ತದೆ. ಪರಿಣಾಮವೆಂದರೆ ವ್ಯವಸ್ಥೆಯ ಪ್ರಧಾನ ಆಶಯವಾಗಿಯೇ ವಿಸ್ಮೃತಿಯಲ್ಲಿ ಉಳಿದು ಹೋಗಿರುವ ಹೆಣ್ಣು ಅಲ್ಲಿಂದ ಹೊರಬರುವುದೆಂದರೆ ಅದು ಸಂಪೂರ್ಣವಾಗಿ ವೈಯಕ್ತಿಕ ಹೊಣೆಯೆ ಆಗುತ್ತದೆ. ಸಾಮಾನ್ಯ ಹೆಣ್ಣುಗಳು ಈ ಹೊಣೆಯನ್ನು ಹೊರಲು ಸಾಧ್ಯವಿಲ್ಲ. ಈಗ ಹೆಂಗಸರು ಸಮುದಾಯವಾಗಿಯೇ ದಡ್ಡರೆನಿಸುತ್ತಾರೆ.

ಮಹಾದೇವಿಯಕ್ಕ ವಿದ್ಯಾಭ್ಯಾಸ ಕುರಿತಂತೆ ಯಾವುದೇ ಪ್ರಾಚೀನ ಕೃತಿಗಳಲ್ಲಿ ವಿವರಗಳು ಇಲ್ಲದೇ ಇದ್ದರೂ ಮಹಾದೇವಿಯಕ್ಕ ಶಿವಭಕ್ತರಾದ ತಂದೆತಾಯಿಯ ಮಗಳಾಗಿ ಸುಸಂಸ್ಕೃತ ಕುಟುಂಬದಲ್ಲಿ ಧರ್ಮಶಾಸ್ತ್ರ, ಸಾಹಿತ್ಯ, ತತ್ವಜ್ಞಾನದ ಪ್ರೌಢ ವಿದ್ಯಾಭ್ಯಾಸ ನಡೆಸಿದಂತೆ ತೋರುತ್ತದೆ. ಅಕ್ಕನ ವಚನಗಳಲ್ಲಿ ಕಂಡುಬರುವ ಸಂಸ್ಕೃತ ಕಾವ್ಯ ಪುರಾಣಗಳ ಉಲ್ಲೇಖಗಳು ಆಕೆಯ ಶಾಸ್ತ್ರಾಧ್ಯಯನ ಮತ್ತು ತತ್ವಜ್ಞಾನದ ತಿಳುವಳಿಕೆಯನ್ನು ಪ್ರಕಟಿಸುತ್ತದೆ. ಇದಕ್ಕೆ ಪೂರಕವೆನ್ನುವಂತೆ ಹರಿಹರ ಕವಿಯು ಶಿವಭಕ್ತಿಚರಿತೆಯ **ಶಿವಜ್ಞಾನ ಸಂಪನ್ನೆಯ ಸಾಹಿತ್ಯವಿದ್ಯೆಯ ಸಕಲಕಲಾಕೊವಿದೆಯಪ್ಪುಡುತಡಿಯ ಮಹದೇವಿಯನ ತನುವಿನ ಬಾಲ್ಯಂ,** ಎಂದಿರುವುದು ಗಮನಾರ್ಹವಾಗಿದೆ.[೨]

ನರಜನ್ಮವ ತೊಡೆದು
ಹರಜನ್ಮವ ಮಾಡಿದ ಗುರುವೆ
ಭವ ಬಂಧನವ ಬಿಡಿಸಿ
ಪರಮಸುಖವ ತೋರಿದ ಗುರುವೆ
ಭವಿ ಎಂಬುದು ತೊಡೆದು
ಚನ್ನಮಲ್ಲಿಕಾರ್ಜುನನ ತಂದೆನ್ನ ಕಯವಶಕೆ
ಕೊಟ್ಟಗುರುವೆ ನಮೋನಮೋ[೩]

ಭಕ್ತಿಯ ಮಾರ್ಗವನ್ನು ತೋರಿಸಿದ ತನ್ನ ಗುರುವಿನ ಸ್ಮರಣೆ ಮಾಡುತ್ತಾ ತನ್ನ ಮನುಷ್ಯ ಜನ್ಮ ಬಂಧನ ಮುಕ್ತ ಮಾಡಿದ ಗುರುವನ್ನು ಅಕ್ಕ ಶರಣು ಎಂದು ಮೇಲಿನ ವಚನದಲ್ಲಿ ವ್ಯಕ್ತಪಡಿಸಲಾಗಿದೆ.

ಹೆಳವನಕಟ್ಟೆ ಗಿರಿಯಮ್ಮ ತನ್ನ ಗಂಡನ ಮನೆಯಲ್ಲಿದ್ದೇ ವಿರಾಗಿಣಿಯಾಗಿ ರಂಗನಾಥನ ಭಕ್ತೆಯಾಗಿ ಬಾಳಿದ ಗಿರಿಯಮ್ಮ ತನ್ನ ಸುತ್ತಿನ ಸಮಾಜಕ್ಕೆ ಉಪಕಾರಿಯಾಗಿ ಮಾರ್ಗದರ್ಶಕಳಾಗಿ, ಬೆಳೆದು

ದೇವರ ರೂಪವೆಂಬಂತೆ ರೂಪಿತವಾಗುತ್ತಾಳೆ. ಆಕೆ ಭಕ್ತಿಯಿಂದ ಪ್ರೇರಿತಳಾಗಿ ಅನೇಕ ಸಣ್ಣ ಹಾಡುಗಳನ್ನೂ ಭಕ್ತರ ಕಥೆಗಳನ್ನೂ ಬರೆದಿದ್ದಾಳೆ. ಅದಕ್ಕೆ ಪೂರ್ವಭಾವಿಯಾಗಿ ಆಕೆಗೆ ವಿದ್ಯಾಭ್ಯಾಸ ದೊರಕಿತ್ತೇ, ಎಂಥ ವಿದ್ಯಾಭ್ಯಾಸ ದೊರಕಿತ್ತು ಎಂಬ ಬಗ್ಗೆ ಖಚಿತವಾಗಿ ಏನನ್ನೂ ಹೇಳುವಂತಿಲ್ಲ,[೪] ಇದರ ಬಗ್ಗೆ ವಿಭಿನ್ನ ಅಭಿಪ್ರಾಯಗಳು ಸಿಕ್ಕುತ್ತವೆ.

೧ ಚಿಕ್ಕಂದಿನಲ್ಲಿ ಓದುಬರಹ ಕಲಿತವಳಲ್ಲವಾದರೂ ಬಹುಶ್ರುತಳಾಗಿದ್ದಳೆಂದೂ ಕೇವಲ ಭಕ್ತಿ ಭಾವದಿಂದ ಕನಕಪುರಂದರಾದಿ ದಾಸರಂತೆ ಅಪರೋಕ್ಷ ಜ್ಞಾನಿಯಾಗಿದ್ದಳೆಂದೂ ಬಾಲ್ಯದಲ್ಲಿಯೇ ಕವಿತಾಶಕ್ತಿಯನ್ನು ಪಡೆದಳೆಂದೂ ತಿಳಿಯುತ್ತದೆ.

೨ ಈಕೆಗೆ ಪ್ರಾಯಶಃ ಗುರುಮುಖದಿಂದ ಕ್ರಮವಾಗಿ ವಿದ್ಯಾಭ್ಯಾಸವಾಗಿರಲಾರದು. ಆದರೆ ಪೂರ್ವಕಾವ್ಯಗಳ ಪುರಾಣೇತಿಹಾಸಗಳ ಒಳ್ಳೆಯ ಪರಿಚಯವಿದ್ದಂತೆ ತೋರುತ್ತದೆ. ಇವಳ ಕಾವ್ಯಶಕ್ತಿ ನೈಸರ್ಗಕವೂ ಪ್ರಾಸಾದಿವೂ ಆಗಿದ್ದು ಭಾಗವತ ಕವಿಗಳಲ್ಲಿ ಕೆಲಮಟ್ಟಿಗೆ ಕುಮಾರವ್ಯಾಸನನ್ನು ನೆನಪಿಗೆ ತರುತ್ತಾಳೆ.

೩ ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣ ಕೊಡಿಸುವ ಪದ್ದತಿ ಅಗಿನ ಕಾಲದಲ್ಲಿ ಬೆಳೆದಿಲ್ಲವಾದ್ದರಿಂದ ತಂದೆಯವರಾದ ಬಿಷ್ಟಪ್ಪಜೋಯಿಸರವರಿಂದಲೇ ಗಿರಿಯಮ್ಮನಿಗೆ ಅಕ್ಷರಭ್ಯಾಸವಾಯಿತು. ತಕ್ಕಮಟ್ಟಿಗೆ ಓದುಬರಹವನ್ನು ಅವಳು ಕಲಿತುಕೊಂಡಳು.

ಈ ಹೇಳಿಕೆಗಳ ಜೊತೆಗೆ ಗಿರಿಯಮ್ಮ ಸ್ವತಃ ಲವಕುಶ ಕಾಳಗದ ಕೊನೆಯಲ್ಲಿ ಹೇಳಿಕೊಡಿರುವ ಮಾತುಗಳನ್ನು ಗಮನಿಸಬಹುದು.

ಅರಿಯದೆ ಮಾಡಿದೆ ಅಜ್ಞಾನತನದಿಂದ
ಬರೆದೋದಿದವಳಲ್ಲ ಮರುಳೆ
ಕರುಣಾಕರದೇವ ಹೆಳವನಕಟ್ಟೆರಂಗಯ್ಯ
ಅರುಹಿಂದಷ್ಟು ಪೇಳಿದನು[೫]

ಆದರೆ ಮೇಲಿನ ಮಾತುಗಳಲ್ಲಿ ಹಾಗೂ ಚಂದ್ರಹಾಸನ ಕಥೆಯಲ್ಲಿ ಕೊನೆಯಲ್ಲಿ ಬರುವ

ಅರಿಯೆನು ಕವಿತಾಚಾತುರ್ಯದ ಮಹಿಮೆಯ ಗುರುಮುಖದಲ್ಲಿ ಹೇಲಲಿಲ್ಲ
ಪರಮದಯಾಳು ಹೆಳವನಕಟ್ಟೆರಂಗಯ್ಯ ವರವಿತ್ತು ಸಲಹೊ ಅನುದಿನವು[೬]

ಎಂಬ ಮಾತುಗಳಾಗಲೀ ಆಕೆ ನಿರಕ್ಷರಕುಕ್ಷಿಯೆಂದು ನಂಬಿಸಲು ಸೋಲುತ್ತವೆ. ಇದಕ್ಕೆ ಮೊದಲ ಕಾರಣವೆಂದರೆ ಇವಳ ಚಂದ್ರಹಾಸನ ಕಥೆ. ಲಕ್ಷ್ಮೀಶನ ಜೈಮಿನಿಭಾರತದ ಚಂದ್ರಹಾಸೋಪಖ್ಯಾನವನ್ನು ಹೆಜ್ಜೆ ಹೆಜ್ಜೆಗೂ ಆರಂಭದಿಂದ ಅಂತ್ಯದವರೆಗೂ ಸಂಧಿಭಾಗ, ಸಂಧಿಗಳ ಸೂಚನಾಪದ್ಯಗಳಿಂದ ಹಿಡಿದು ವರ್ಣನೆ ನಿರೂಪಣೆ ಎಲ್ಲದರಲ್ಲೂ ಅನುಸರಿಸುವುದು. ಛಂದಸ್ಸು ಮಾತ್ರ ಭಿನ್ನವಾಗುತ್ತದೆ. ಹೀಗಾಗಿ ಇದು ಇನ್ನೊಬ್ಬರು ಓದಿದ್ದನ್ನು ಒಂದುಸಾರಿಯೊ ಎರಡುಸಾರಿಯೊ ಕೇಳಿ ಬರೆದ ಹಾಡಂತೂ ಅಲ್ಲ. ಲಕ್ಷ್ಮೀಶನ ಕಾವ್ಯದಲ್ಲಿ ಬರುವ ಚಂದ್ರಹಾಸನ ಕಥೆಯನ್ನೇ ಚರಿತೆಯ ಮಾಡಿ ವರ್ಣಿಸುವೆ ಎಂದು ಆರಂಭದಲ್ಲಿ ಹೇಳಿಕೊಂಡಿದ್ದಾಳೆ. ಲವಕುಶ ಕಾಳಗದಲ್ಲಿ ಭವಭೂತಿಯ ಉತ್ತರರಾಮಚರಿತದ ಪ್ರಭಾವವಿರುವುದನ್ನು

ಗುರ್ತಿಸುವುದನ್ನು ಗಮನಿಸಿದಾಗ ಗಿರಿಯಮ್ಮನಿಗೆ ಕ್ರಮಬದ್ಧ ವಿದ್ಯಾಭ್ಯಾಸ ದೊರೆಯದೇ ಇದ್ದರೂ ತಕ್ಕಮಟ್ಟಿನ ಓದುಬರಹ ತಿಳಿದಿದ್ದಿರಬೇಕು ಎನ್ನಿಸುತ್ತದೆ.

ಗಿರಿಯಮ್ಮ ತನ್ನ ಪ್ರತಿಭೆಯಿಂದಲೇ ಗುರ್ತಿಸಿಕೊಂಡವಳು, ಸುಮತೀಂದ್ರಸ್ವಾಮಿಗಳ ಈಕೆಯಲ್ಲಿ ಹುದುಗಿದ್ದ ಪ್ರತಿಭೆಯನ್ನು ಪೋಷಿಸಿದರು. ಗೋಪಾಲದಾಸರ ಅನುಗ್ರಹವೂ ಇದ್ದುದರಿಂದ ಅಕ್ಷರಜ್ಞಾನಿಯಾಗಿ ಪುರಾಣೇತಿಹಾಸಗಳ ಬಗ್ಗೆ ಆಸಕ್ತಿ ಇತ್ತು. ತನ್ನ ಹಾಡುಗಳ ರಚನೆಯೂ ಕೂಡ ಐತಿಹಾಸಿಕ ಮತ್ತು ಪುರಾಣಗಳ ಹಿನ್ನೆಲೆಯಲ್ಲಿ ರಚನೆಯಾದಂತವು. ವಾಲ್ಮೀಕಿ ಮಕ್ಕಳಿಗೆ ಭೋದಿಸಿದಂತೆ ಭೋದಿಸಿದನು ಹೆಳವನಕಟ್ಟೆ ರಂಗ, ಎಂದಿದ್ದು ತನ್ನ ದೈವದ ಕೃಪೆಯಿಂದ ತಾನು ಕಲಿತದ್ದು ಎಂದು ಹೇಳಿಕೊಂಡಿದ್ದಾಳೆ.

ಶಿಕ್ಷಣ ವ್ಯಕ್ತಿಯ ಜ್ಞಾನಪಿಪಾಸೆಯನ್ನು ಹಿಂಗಿಸುವುದರ ಜೊತೆಯಲ್ಲಿ ಜ್ಞಾನಾರ್ಜನೆಗೆ ಮಾಧ್ಯಮವಾಗುವಂತೆ ಮನಸ್ಸನ್ನು ಅಣಿಗೊಳಿಸುತ್ತದೆ. ಜೊತೆಯಲ್ಲಿ ಸಮನ್ವಿತ ವಿಕಾಸ, ಆಧ್ಯಾತ್ಮಿಕ ಸಾಧನೆ, ಸ್ವಚಾರಿತ್ರ್ಯ ಬೆಳವಣಿಗೆ, ಭೌತಿಕ ಬೆಳವಣಿಗೆ, ಸಾಂಸ್ಕೃತಿಕ ರಕ್ಷಣೆ ಮತ್ತು ವರ್ಧನೆ, ಪೌರಹೊಣೆಗಾರಿಕೆ, ಜ್ಞಾನ, ಸಾಮಾಜಿಕ ಹಾಗೂ ರಾಷ್ಟ್ರೀಯ ಐಕ್ಯತೆ ಈ ಮುಂತಾದುವುಗಳನ್ನು ಗುರಿಯಾಗಿಟ್ಟುಕೊಂಡು ಸಮಾಜ ಅಭಿವೃದ್ಧಿ ಪಥದತ್ತ ಸಾಗುವಲ್ಲಿ ಪೂರಕ ಪಾತ್ರವಹಿಸುತ್ತದೆ.

ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮನ ವಚನ ಮತ್ತು ಕೀರ್ತನಾ ಸಾಹಿತ್ಯವು ಅಂದಿನ ಕಾಲಘಟ್ಟದಲ್ಲಿ ಇದ್ದಂತಹ ಅಂಧಕಾರ, ಮೂಢನಂಬಿಕೆ, ಬಹುಪತ್ನಿತ್ವ, ಬಾಲ್ಯವಿವಾಹ, ಆಚಾರ ವಿಚಾರ, ಜಾಗೃತಿ ಮೂಡಿಸುವುದರ ಜೊತೆಗೆ ಲೌಕಿಕ ಮತ್ತು ಅಲೌಕಿಕ ಎಂಬ ಆಧ್ಯಾತ್ಮಿಕ ಶಿಕ್ಷಣವನ್ನು ಹೇಳಿಕೊಟ್ಟರು. ಈ ರೀತಿಯ ಮೌಲ್ಯಧಾರಿತ ಶಿಕ್ಷಣವು ಅಂದಿನ ಕಾಲಕ್ಕೆ ಹೆಚ್ಚು ಪ್ರಚುರತೆಯನ್ನು ಪಡೆದುಕೊಂಡಿದ್ದವು.

## ಅಡಿ ಟಿಪ್ಪಣಿ

೧. ಪಾಲಾಕ್ಷ, ಭಾರತದ ಇತಿಹಾಸ, ಶಶಿ ಪ್ರಕಾಶನ, ತುಮಕೂರು, ಮುದ್ರಣ೨೦೦೦, ಪುಟ: ೧೨೬

೨. ಎಚ್ ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬, ಪುಟ: ೬೪

೩. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೫೫

೪. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೧೪

೫. ಅದೇ ಪುಟ: ೧೪೭

೬. ಅದೇ ಪುಟ: ೧೪

**೬) ಮಹಿಳಾ ಲೋಕ:-**

ಶರಣ ಚಳುವಳಿಯ ಉದಾತ್ತ ಮಾನವೀಯ ಚಿಂತನೆಗಳಿಗೆ ಆಕರ್ಷಿತರಾದ ಮಹಿಳೆಯರು ಸಾಮುದಾಯಿಕವಾಗಿ ವಚನ ರಚನೆಯಲ್ಲಿ ತೊಡಗಿಸಿಕೊಂಡರೆನ್ನುವುದು ಐತಿಹಾಸಿಕ ಸಂಗತಿ. ವಚನ ಸ್ವರವಚನ, ಕಾಲಜ್ಞಾನ, ತ್ರಿವಿಧಿ, ಇರಾದಿ ಸಾಹಿತ್ಯ ಪ್ರಕಾರಗಳಲ್ಲಿ ತಮ್ಮ ಅನುಭಾವಿಕ ಚಿಂತನೆಗಳನ್ನು ಸಾಮಾಜಿಕ ಸಂವೇದನೆಗಳನ್ನು ಅತ್ಯುತ್ಸಾಹದಿಂದ ಬರಹ ರೂಪಕ್ಕಿಳಿಸಿದ ಸ್ತ್ರೀಸಮಾಜವು ಬಸವೋತ್ತರ ಸಂದರ್ಭದಲ್ಲಿ ಸಾಹಿತ್ಯ ಪ್ರಪಂಚದಿಂದ ಅದೃಶ್ಯವಾದದ್ದು ಕುತೂಹಲಕಾರಿಯಾಗಿದೆ. ಕ್ರಿ ಶ ೧೩ ನೇಶತಮಾನದಿಂದ ೧೮ ನೇಯ ಶತಮಾನದವರೆಗಿನ ವೀರಶೈವ ಕಾವ್ಯಗಳಲ್ಲಿ ಶರಣರ ವ್ಯಕ್ತಿತ್ವ ಮತ್ತು ಸಾಧನೆಗಳು ಮರುವ್ಯಾಖ್ಯಾನಗಳಿಗೆ ಒಳಪಡುತ್ತಾ ಜನಜೀವನವನ್ನು ಪ್ರವೇಶಿಸಿವೆ.

ಕ್ರಿ ಶ ೧೫೦೦ ರಿಂದ ಮಹಿಳಾ ಅನ್ವೇಷಣೆಯನ್ನು ಆರಂಭಿಸಿದಾಗ ೧೬ ನೇಯ ಶತಮಾನ ಈ ದೃಷ್ಟಿಯಂದ ಬರಡು ಕಾಲ. ಸುಮಾರು ಒಂದೂವರೆ ಶತಮಾನದಲ್ಲಿ ಯಾವೊಬ್ಬ ಕವಯಿತ್ರಿಯೂ ಕಂಡುಬರುವುದಿಲ್ಲ. ಈ ಆವಧಿಯ ಮಹಿಳಾ ಸಾಹಿತ್ಯ ಕಾಲಗರ್ಭದಲ್ಲಿ ನಾಶವಾಯಿತೇ ಅಥವಾ ಮೌಖಿಕ ಪರಂಪರೆಯಲ್ಲಿ ಹರಿದುಹೋಯಿತೇ ಖಚಿತವಾಗಿ ಹೇಳಲಾಗುತ್ತಿಲ್ಲ, ಅ ಬಳಿಕದಲ್ಲಿ ಲೇಖಕಿಯರನ್ನು ಕಾಣಬೇಕಾದರೆ ಮೈಸೂರು ಒಡೆಯರ ಕಾಲದವರೆಗೆ ಕಾಯಬೇಕಾಗುತ್ತದೆ. ಚಿಕ್ಕದೇವರಾಜನ ಆಶ್ರಯದಲ್ಲಿ ಶತಮಾನದ ಬಳಿಕ ಕವಯಿತ್ರಿಯರು ಮೊದಲ ಬಾರಿಗೆ ಕಾಣಿಸಿಕೊಂಡರು. ನಂತರ ಅವಧಿಯಲ್ಲಿ ಸಂಚಿ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಕಾಣಿಸಿಕೊಂಡರು. ಭಕ್ತಿನಿಷ್ಠ ನೆಲೆಯ ಕವಯತ್ರಿಯರಾಗಿ ಈ ಶತಮಾನ ಆವಧಿಯಲ್ಲಿ ಸಾಹಿತ್ಯ ಅಧ್ಯಯನ ಮಾಡಬಹುದು.

ವಚನಕಾರ್ತಿಯರಲ್ಲಿ ಸದ್ಯಕ್ಕೆ ಉಪಲಬ್ದವಿರುವ ೩೫ ವಚನಕಾರ್ತಿಯರಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಉತ್ಕೃಷ್ಟ ಸಾಹಿತ್ಯಿಕ ಮೌಲ್ಯವುಳ್ಳ ವಚನಗಳನ್ನು ರಚಿಸಿದವಳು ಅಕ್ಕಮಹಾದೇವಿ. ನೂರಕ್ಕೂ ಹೆಚ್ಚೂ ವಚನಗಳನ್ನು ರಚಿಸಿರುವವರು ಅಕ್ಕಮ್ಮ, ಅಮುಗೆ ರಾಯಮ್ಮ, ಹಡಪದ ಲಿಂಗಮ್ಮ, ಅನುಭಾವ ಮತ್ತು ತತ್ವ ಚಿಂತನೆಯುಳ್ಳ ಗಂಭೀರ ವಚನಗಳ ಕರ್ತೃ ಮುಕ್ತಾಯಕ್ಕ, ಮಸಣಮ್ಮ, ಕಾಳವ್ವೆ, ರೇಯಮ್ಮ, ರೆಚವ್ವ, ಕಾಮವ್ವ, ಲಕ್ಷ್ಮಮ್ಮ, ಸೋಮಮ್ಮ, ರಾಯಮ್ಮ, ರೇಕಮ್ಮ, ಸಂಕವ್ವೆ, ಗಂಗಮ್ಮ ಮುಂತಾದವರ ವಚನಗಳು ಮಾತ್ರ ದೊರಕಿವೆ. ಅಕ್ಕ ನಾಗಮ್ಮ, ನೀಲಾಂಬಿಕೆ, ಗಂಗಾಬಿಕೆ, ಮೋಳಿಗೆಯ ಮಹಾದೇವಮ್ಮ ಮುಂತಾದ ವಚನಾಕಾರ್ತಿಯರನ್ನು ಹೊರತುಪಡಿಸಿದರೆ ಉಳಿದ ಬಹುತೇಕ ವಚನಕಾರ್ತಿಯರ ಜೀವನ ವೃತ್ತಾಂತ ಅಸ್ಪಷ್ಟವಾಗಿದೆ. ವಚನಗಳ ಭಾವ ಭಾಷೆ ಮತ್ತು ಧೋರಣೆಗಳು ವಚನಕಾರ್ತಿಯರ ವ್ಯಕ್ತಿತ್ವ ಮತ್ತು ಸಾಮಾಜಿಕ ಸಾಂಸ್ಕೃತಿಕ ಪರಿಸರವನ್ನು ಗ್ರಹಿಸುವಲ್ಲಿ ನೆರವಾಗುತ್ತವೆ. ಕೆಲವು ವಚನಕಾರ್ತಿಯರ ಹೆಸರೊಂದನ್ನು ಬಿಟ್ಟರೆ ಉಳಿದ ವಿವರಣೆಗಳಾವುವೂ ತಿಳಿದುಬರುವುದಿಲ್ಲ. ವಚನಕಾರ್ತಿಯರು ವಿಭಿನ್ನ ಜಾತಿ, ವೃತ್ತಿ ಮತ್ತು ಸಾಮಾಜಿಕ ಸ್ಥಾನಮಾನಗಳ ಹಿನ್ನೆಲೆಯುಳ್ಳವರಾಗಿರುವುದರಿಂದ ಅವರ ಆಯ್ಕೆ ಆದ್ಯತೆ ಮತ್ತು ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯಿದೆ. ಲೋಕಗ್ರಹಿಕೆಯಲ್ಲಿರುವ ವ್ಯಕ್ತಿ ವಿಶಿಷ್ಟತೆಯ ಕಾರಣವಾಗಿ ವಚನಕಾರ್ತಿಯರ ಸಾಧನೆಯ ಮಾರ್ಗಗಳೂ ಭಿನ್ನವಾಗಿವೆ.

ವಿರಕ್ತಿ ಸಾಧಕಿಯದ ಅಕ್ಕಮಹಾದೇವಿ, ಗೊಗ್ಗವೆ, ಬೊಂತಾದೇವಿ, ಸತ್ಯಕ್ಕ **ಶರಣಸತಿ-ಲಿಂಗಪತಿ** ಎನ್ನುವ ಪಾರಮಾರ್ಥಿಕ ಆದರ್ಶವನ್ನು ಇಹ-ಪರಸಿದ್ದಿಯ ಸೂತ್ರವಾಗಿಸಿಕೊಂಡಿದ್ದಾರೆ. **ಇಹಕ್ಕೊಬ್ಬ**

**ಗಂಡನೇ? ಪರಕ್ಕೊಬ್ಬ ಗಂಡನೇ? ಲೌಕಿಕಕ್ಕೊಬ್ಬ ಗಂಡನೆ? ಪಾರಮಾರ್ಥಕ್ಕೊಬ್ಬ ಗಂಡನೇ?** ಎನ್ನುವ ದ್ವಂದ್ವವನ್ನು ಮೀರಿ ಪರಮಾತ್ಮನನ್ನು ಪತಿಯಾಗಿ ಅರಾಧಿಸಿದ್ದಾರೆ

ಜಾತಿ ಮತ್ತು ವೃತ್ತಿನಿಷ್ಠವಾದ ಕೀಳರಿಮೆಯನ್ನು ಕಳೆದುಕೊಂಡ ಶರಣರ ಸಮಾನತೆ ವ್ಯಕ್ತಿ ಸ್ವಾತಂತ್ರ್ಯ ಮುಕ್ತ ಧಾರ್ಮಿಕ ಅವಕಾಶಗಳಿಂದ ಪ್ರೇರಿತರಾಗಿ ಹೊಸಬದುಕನ್ನು ಆಯ್ದುಕೊಂಡ ಕೆಳವರ್ಗದ ವಚನಕಾರ್ತಿಯರು ತಮ್ಮ ವ್ರತ ಆಚಾರನಿಷ್ಠೆ, ಕಾಯಕ ಶ್ರದ್ದೆ.ಸಾಮಾಜಿಕ ಶುದ್ಧೀಕರಣಗಳ ತೀವ್ರ ಕಾಳಜಿಯಿಂದ ವಿಶಿಷ್ಟರೆನಿಸುತ್ತಾರೆ.ಸಮಕಾಲೀನ ಸಾಮಾಜಿಕ ವಾಸ್ತವದ ಓಳಸೂಕ್ಷ್ಮಗಳನ್ನು ವಿಶ್ಲೇಷಿಸುತ್ತ ಶರಣರ ಜನಪರ ಆಶಯಗಳಿಗೆ ಶಕ್ತಿತುಂಬಿರುವವರು ಅಕ್ಕಮ್ಮ, ಅಮುಗೆ ರಾಯಮ್ಮ, ಕದಿರೆ ಕಾಳವ್ವೆ ಮುಂತಾದವರು ಭಕ್ತಿಯನ್ನೇ ಕಾಯಕ ಮಾಡಿಕೊಂಡಂತಹ ಅಕ್ಕಮಹಾದೇವಿ ಸಮಾಜೋಶುದ್ದೀಕರಣ ಕೆಲಸವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು.

**೬.೧)ಅಂತರ್ಜಾಲವಾಗಿ ವಚನ ಮತ್ತು ಕೀರ್ತನೆ:-**

ಬಲ್ಲವರೆ ಬಲ್ಲರು ಎಲ್ಲರಿಗೆ ತಿಳಿಯದು
ಕಲ್ಲೊಳಗೆ ಅನಲಿರುವಂತೆ ಇದರನುವ
ಬಲ್ಲವರಿಗರ್ಥ ತಿಳಿವುದು[೧]

ಚಿನ್ನ ಬಣ್ಣಗಳಂತೆ ರನ್ನ ದೀಪ್ತಿಗಳಂತೆ ಭಿನ್ನವಿಲ್ಲದಲೆ ಬೆರೆದಿಹ ಲಿಂಗಾಗಯೋಗದ ಸಮರಸಾನುಭೂತಿಯ ಶಬ್ದಾತೀತವಾದದು. ಅಂತೆಯೇ ಅದು ಉಪಮಾತೀತವೂ ಪನ್ನಗದರನ ಶರಣರಿಗೆ ಮಾತ್ರ ಎಟುಕಬಲ್ಲಾತ್ಮಾನಂದದ ಸವಿಸುಖವನ್ನು ಮಾತಿನಲ್ಲಿ ಮೂಡಿಸುವುದು ಅಸಾಧ್ಯವೆನ್ನುತ್ತಲೇ ಲೌಕಿಕ ದೃಷ್ಟಾಂತಗಳ ಮೂಲಕ ಗಮ್ಯವಾಗಿಸುವ ಅಕ್ಕನ ಸಾಹಸ ಅಪೂರ್ವವಾಗಿದೆ. ಅನುಭಾವದ ಅನಿರ್ವಚನಿಯತೆಯನ್ನು, ಲೋಕಾನುಭವದ ಮೂಲಕ ಬಿಂಬಿಸಿರುವ ರೀತಿ ಅನನ್ಯವಾದದು.

ತನ್ನ ಬುದ್ದಿ ತಲೆಗೆ ಸುತ್ತಿ ಸಂಸಾರ ಭ್ರಮೆಗೊಂಡು ಬಳಲದಿರು ಮನವೆ
ತೊಳಲದಿರು ನೆಲೆದಾಸೆಗೆ ನೀನದ ಅನುಸರಿಸಿ ಹರಿಸಿ ಸ್ಮರಿಸು ಮನವೆ[೨]

ಬುದ್ದಿ ತಲೆಯಲ್ಲಿ ಸುತ್ತಿ ಸಂಸಾರದ ಭ್ರಮೆಗೆ ಸಿಕ್ಕಿ ಬಳಲದಿರು, ನೆಲದಾಸೆಯನ್ನು ಬಿಟ್ಟು ಹರಿಯನ್ನು ಸ್ಮರಿಸು ಎಂದು ಹರಿನಾಮ ಸ್ಮರಣೆಗೆ ಓತ್ತು ನೀಡಿರುವುದು ಗಿರಿಯಮ್ಮನ ಭಕ್ತಿಯ ಅಭಿವ್ಯಕ್ತಿಯ ಕಾಣಬಹುದು.

ಈ ನಿಟ್ಟಿನಲ್ಲಿ ಅಕ್ಕನ ವಚನಗಳು ಮತ್ತು ಕೀರ್ತನೆಗಳು ಅಂತರ್ಜಾಲದ ಅನ್ವಯಗಳಾಗಿ, ಸಂದೇಶವನ್ನು ನೀಡುವುದರಲ್ಲಿ ಸಮೂಹ ಮಾಧ್ಯಮಗಳ ರೀತಿಯಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಜನಮಾನಸದಲ್ಲಿ ಉಳಿಯುವಂತ ನೈತಿಕ ಮೌಲ್ಯವನ್ನು ಆಧರಿಸಿದಂತಹವು, ಭಕ್ತಿ ಕಡೆಗೆ ಮನಸ್ಸನ್ನು ಆಕರ್ಷಿಸುವಂತ ಹಾಡುಗಳು ಆಗಿದ್ದವು. ೨೧ನೇ ಶತಮಾನದಲ್ಲಿ ಇಂಟರ್‌ನೆಟ್, ದೂರವಾಣಿ, ದೂರದರ್ಶನ, ರೇಡಿಯೊ ಮುಂತಾದ ಸಮೂಹಮಾಧ್ಯಮಗಳು ಸಮಾಚಾರ ಮತ್ತು ಮನರಂಜನೆಯನ್ನು ನೀಡುವಂತೆ ೧೨ನೇ ಶತಮಾನದಲ್ಲಿ ಮತ್ತು ೧೮ನೇ ಶತಮಾನದಲ್ಲಿ ಇವುಗಳ ಲಭ್ಯತೆ ಇಲ್ಲದಿದ್ದರೂ

ಕೂಡ ಅಕ್ಕನ ವಚನಗಳು ಗಿರಿಯಮ್ಮನ ಕೀರ್ತನೆಗಳು ಜನರ ಮನಸ್ಸಿನಲ್ಲಿ ಉಳಿಯುವಂತೆ ಹಾಡಿದರು. ಭಕ್ತಿಯನ್ನು ಸಾರಿದರು, ಜ್ಞಾನವನ್ನು ಹಂಚಿದರು, ಅವರ ವಚನ ಮತ್ತು ಕೀರ್ತನೆಗಳು ಇಂದಿಗೂ ಪ್ರಸ್ತುತ.

ಜಾಗತೀಕರಣದ ಉದ್ದೇಶಗಳಿಗೆ ತಕ್ಕಂತೆ ಪ್ರಸಾರ ಮಾಧ್ಯಮಗಳು ರೂಪುಗೊಳ್ಳುತ್ತವೆ. ಇದೊಂದು ಪ್ರಬಲ ಸಾಧನ ಅಯಾ ನೆಲದ ಸಂಸ್ಕೃತಿಯನ್ನು ನಂಬಿಕೆಗಳನ್ನು ಅಪಮೌಲ್ಯಗೊಳಿಸುವ ಎಲ್ಲ ಪ್ರಯತ್ನಗಳನ್ನು ಮಾಡುತ್ತದೆ. ಮಹಿಳೆಯ ಕುರಿತಾದಂತೆ ಅನೇಕ ಪೂರ್ವ ಗ್ರಹತನಗಳನ್ನು ಜಾಹೀರಾತಿನ ಮೂಲಕ ಪಸರಿಸುತ್ತದೆ. ಉದಾಹರಣೆ ಒಬ್ಬ ಕುರುಡ ಬಾಳೆಹಣ್ಣು ತಿಂದು ಸಿಪ್ಪೆ ಎಸೀಬೇಕು ಸಿಪ್ಪೆ ವಾಸನೆ ಬರೋಕಡೆ ಎಸಿಯೋಕೆ ಹೋದ, ಓಬ್ಬ ಮಾಧ್ಯಮ ವರ್ಗದ ಮಹಿಳೆ ತನ್ನ ಮೇಲೆ ಎಲ್ಲಿ ಎಸೀತಾನೆ ಅಂತ ಬೆಚ್ಚಿ ಏಳುತ್ತಾಳೆ. ಆಗ ಅವಲ ಕೈಗೆ ಡಿಯೊಡ್ರೆಂಟ್ ಕೋಡ್ತಾರೆ. ಅಂದರೆ ಅವಳಿಂದ ಬೆವರಿನ ವಾಸನೆ ಬರ್‍ತೀದೆ, ಅದು ತಿಪ್ಪೆತರಾ ವಾಸನೆ....ಮತೊಂದು ಜಾಹೀರಾತಿನಲ್ಲಿ ವಿಮಾನದಲಿ ಪ್ರಯಾಣ ಮಾಡ್ತೀದ್ದಾರೆ. ಪಕ್ಕದಲ್ಲಿರೊ ಹೆಂಗಸಿನ ಕಡೆಯಿಂದ ಬೆವರಿನ ವಾಸನೆ ಅವಳನ್ನು ಎತ್ತಿ ಎಸೆದು ಬಿಡ್ತಾರೆ...ಮಧ್ಯದಲ್ಲೆ ಉಪಯೋಗಿಸು ಅಂತ ಡಿಯೋಂಡ್ರಂಟ್ ಬಾಟಲ್ ಕೋಡ್ತಾರೆ ಇವೆಲ್ಲಾ ತಮಾಷೆಯಾಗಿ ಕಾಣ್ತವೆ,[5] ಇದನ್ನು ಅಪಮಾನ ಮಾಡ್ತಿದ್ದಾರೆ ಅನ್ನಿಸಲ್ವ. ಬೆವರಿಗೆ ನಾವೂ ಕೊಡೊ ಬೆಲೆ ಬಹಳ ಮಹತ್ವದ್ದು, ತಾಯಿಯೊಬ್ಬಳು ತನ್ನ ಮಗು ಯಾವುದು ಅಂತ ತಿಳಿಯದೇ ಹೋದಾಗ ಮಗುವಿನ ನೆತ್ತಿ ಮೂಸಿ ತನ್ನ ಮಗು ಅಂತ ಗುರುತು ಹಿಡಿತಾಳಂತೆ. ಇಂಥ ದೊಡ್ಡ ಮೌಲ್ಯ ನಂಬಿಕೆ ನಮ್ಮ ಪರಂಪರೆಯಲ್ಲಿ ಇದೆ ಇಂದು ಅದೇ ಪ್ಯಾಷನ್ ಆಗಿದ್ದು ಚಿಕ್ಕ ಮಕ್ಕಳು ಡಿಯೋಡ್ರಂಟ್ ಕೇಳುತ್ತಾರೆ. ಇಂತಹ ಹಲವು ರೀತಿಯ ಜಾಹೀರಾತಿನ ಅನ್ವಯಗಳನ್ನು ಹಾಗೂ ಜೀವನದ ಅಮೂಲ್ಯವಾದ ಕಟುಸತ್ಯಗಳನ್ನು ವಚನಕಾರ್ತಿಯರು ಮತ್ತು ಕೀರ್ತನಕಾರರು ಅಂದಿನ ಕಾಲಘಟ್ಟದಲ್ಲೇ ಜನರಿಗೆ ತಿಳಿಸಿಕೊಟ್ಟಿದ್ದರು.

ಆದರೆ ಇಂದು ಈ ವ್ಯಾಪಾರಿ trande ನ್ನು ಹುಟ್ಟು ಹಾಕಲು ವಿದೇಶಿ ಕಂಪನಿಗಳು ಬೃಹತ್ ಪ್ರಮಾಣದ ಬಂಡವಾಳವನ್ನೇ ತೊಡಗಿಸುತ್ತಿವೆ. ಹೆಣ್ಣನ್ನು ಒಂದು ಸಂಸ್ಕೃತಿ ಮೌಲ್ಯ ಎಂದು ಭಾವಿಸದೇ ಮುಕ್ತ ಲೈಂಗಿಕ ಕ್ರಿಯೆಯಲ್ಲಿ ಯಾವುದೇ ನೀತಿ ನಿಯಮಗಳಲ್ಲದೇ ತೊಡಗಿಸುತ್ತೀವೆ. ಎಷ್ಟು ಸಾಧ್ಯವೂ ಅಷ್ಟು ಬೆತ್ತಲೆಗೊಳಿಸುವ ಮತ್ತು ಅದನ್ನೇ ಉತ್ಪಾದನೆಯ ಮೂಲವೆಂದು ಭಾವಿಸುವ ವ್ಯಾಪಾರಿ ಮನೋಧರ್ಮ ಬೆಳೆಯುತ್ತದೆ. ಲೈಂಗಿಕತೆಯನ್ನು ಮಾನಸಿಕ ಕ್ರಿಯೆ ಎಂದು ಭಾವಿಸದೇ ಆರ್ಥಿಕ ವಹಿವಾಟಿನ ಸಾಧನವೆಂದು ಪ್ರಯೋಗಿಸುತ್ತಿರುವುದು ಅತ್ಯಂತ ಅಪಾಯಕಾರಿ ಬೆಳವಣಿಗೆಯಾಗಿದೆ. ಸಿನಿಮಾ, ಕಿರುತೆರೆಗಳಲ್ಲಿಯೂ ಇದು ಮುಂದುವರೆದಿದೆ. ನೈತಿಕತೆಯ ಎಲ್ಲಾ ಮಗ್ಗಲುಗಳನ್ನು ಅಪಹಾಸ್ಯ ಮಾಡುವ ಅಪಮೌಲ್ಯಗೊಳಿಸುವ ಪ್ರಯತ್ನಗಳು ನಡೆದಿವೆ. ಇದಕ್ಕೆ ನಗರ ಗ್ರಾಮೀಣ ಎನ್ನದೆ ಮಹಿಳೆ ಮೋಹ ಭ್ರಮೆಯ ಜಾಲಕ್ಕೆ ಸಿಕ್ಕು ಆತ್ಮ ಗೌರವವನ್ನು ಕಳೆದುಕೊಳ್ಳುತ್ತಿದ್ದಾರೆ. ಈ ಎಲ್ಲ ಬೆಳವಣಿಗೆಗಳು ಹೆಣ್ಣನ್ನು ಒಂದೆಡೆ ಭ್ರಮಾಲೋಕಕ್ಕೆ ಕರೆದ್ಯೊದರೆ ಮತ್ತೊಂದು ಅನಿವಾರ್ಯವೆನ್ನುವ ಪರಿಸ್ಥಿತಿಯನ್ನು ನಿರ್ಮಿಸುತ್ತಿದೆ.

ಹೆಣ್ಣು ತನ್ನ ಭಾವನೆಗಳನ್ನು ತೋಡಿಕೊಳ್ಳುವುದಕ್ಕೆ ಇಂತಹ ಕನಸು ಅಥವಾ ಸ್ವಗತ, ಆತ್ಮ ನಿವೇದನೆಯ ಮಾದರಿಗಳನ್ನೆ ಆಯ್ದುಕೊಳ್ಳುತ್ತಾಳೆ ಎಂಬುದಕ್ಕೆ ಇನ್ನೂ ಹೆಚ್ಚಿನ ನಿದರ್ಶನಗಳು ನಮಗೆ ಸಿಗುವುದು ಜನಪದ ಸಾಹಿತ್ಯದಲ್ಲಿ. ಜನಪದ ಸ್ತ್ರೀಯರ ಬೀಸುವ ಕಲ್ಲಿನ ಪದಗಳೆಲ್ಲವೂ ಹೀಗೆ ತಮ್ಮಷ್ಟಕ್ಕೆ ತಾವೇ ಏಕಾಂತದಲ್ಲಿ ಮೆಲುದನಿಯಲ್ಲಿ ಹೇಳಿಕೊಳ್ಳುವ ಹಾಡುಗಳಾಗಿವೆ. ಇವು ಒಂದು ರೀತಿಯ

ಅಂತರ್ಜಾಲದ ಅನ್ವಯಗಳಂತೆ ಕಾರ್ಯನಿರ್ವಹಿಸಿವೆ. ಹೆಣ್ಣೊಬ್ಬಳು ಇನ್ನೊಬ್ಬ ಹೆಣ್ಣಿನೊಂದಿಗೆ ಮಾತ್ರವೇ ತನ್ನ ಒಳಗನ್ನು ನಿವೇದಿಸಿಕೊಳ್ಳುವುದೂ ಕೂಡ ಗಮನಿಸಬೇಕಾದ ಅಂಶ. ಇದು ಹೆಣ್ಣು ತನ್ನ ವೈಯಕ್ತಿಕ ನೆಲೆಯಲ್ಲಿ ಅನುಭವಿಸುವ ಸಂಗತಿಗಳು ಎಲ್ಲ ಹೆಣ್ಣುಗಳ ಅನುಭವಗಳು ಆಗಿರುತ್ತವೆ ಎಂಬುದನ್ನು ಸೂಚಿಸುತ್ತದೆ. ಇಂತಹ ವಿಶಿಷ್ಟ ತಂತ್ರವನ್ನು ಅಳವಡಿಸಿಕೊಂಡು ಕವಯಿತ್ರಿಯರು ತಮ್ಮ ಬಿಕ್ಕಟ್ಟುಗಳನ್ನು ಪರಿಹರಿಸಿಕೊಂಡ ರೀತಿ ಅಕ್ಕಮಹಾದೇವಿಯೇ ಮೇಲ್ಪಂಕ್ತಿಯಾಗಿದ್ದಾಳೆ. ಅಕ್ಕನ ವಚನಗಳಲ್ಲಿ ಈ ಎಲ್ಲ ತಂತ್ರಗಳೂ ಬಳಕೆಯಾಗಿವೆ. ತನ್ನಾಂತರಂಗದ ತೊಳಲಾಟಗಳನ್ನು ಆಕೆ ಗೆಳತಿಯರೊಂದಿಗೆ ಓರಗೆಯ ಹೆಂಗಸರೊಂದಿಗೆ ನಿವೇದಿಸಿಕೊಳ್ಳುತ್ತಾಳೆ. ಪುರುಷ ಪ್ರಧಾನ ಸಮಾಜದ ಜೊತೆ ಹಂಚಿಕೊಳ್ಳಲಾಗದ ಅನುಭವಗಳನ್ನು ಸ್ತ್ರೀಸಂಭೋದನೆಯ ಮೂಲಕ ತನಗೆ ತಾನೇ ಹೇಳಿಕೊಳ್ಳುವುದು ಒಂದು ಸಂಕಟಮಯ ಪ್ರಾಯವೇ ಸರಿ. ಅಕ್ಕನ ಬಹುತೇಕ ವಚನಗಳಲ್ಲಿರುವುದು ಆತ್ಮನಿವೇದನೆಯ ಧಾಟಿ ಎಂದೂ ಬರಗೂರು ರಾಮಚಂದ್ರಪ್ಪ ವಿಶ್ಲೇಷಿಸುತ್ತಾರೆ. ಇದು ಅಕ್ಕನಿಗೆ ಮಾತ್ರ ಅನ್ವಯಿಸುವುದಿಲ್ಲ. ಇಡೀ ಕಾವ್ಯಗಳಿಗೆ ಅನ್ವಯಿಸುವ ಮಾತೂ ಆಗಿದೆ.

ಪುರುಷ ಸಮಾಜವನ್ನು ಕುರಿತು ಟೀಕೆ, ಪುರುಷನಿಂದಾಗುವ ಶೋಷಣೆಗಳು ಮಾತ್ರವೇ ಅಲ್ಲ, ಪ್ರೀತಿ, ಪ್ರೇಮ ಪ್ರಣಯದಂತಹ ಸಂಗತಿಗಳನ್ನು ತಿಳಿಸುವ ವಚನ ಮತ್ತು ಕೀರ್ತನೆಗಳು ಹಾಡಿದ್ದಾರೆ. ಬಹುಶಃ ಎಲ್ಲಾ ಕವಯಿತ್ರಿಯರು ಪ್ರಧಾನ ವಿಷಯವು ಪ್ರೀತಿ, ಪ್ರೇಮ, ಪ್ರಣಯ, ವಿರಹವನ್ನು ಆಧರಿಸಿವೆ. ಇಲ್ಲಿಯೂ ಅಕ್ಕನೇ ನಮಗೆ ಮಾದರಿ. **ಅಕ್ಕ ಕೇಳವ್ವಾ, ನಾನೊಂದ ಕನಸ ಕಂಡೆ** ಎನ್ನುತ್ತಾ ಪರಪುರುಷನಲ್ಲಿನ ತನ್ನ ಅನುರಕ್ತಿಯನ್ನು ಅಥವಾ ನಿಜವಾದ ಪುರುಷ ಹೇಗಿರಬೇಕೆಂಬ ತನ್ನ ನಿರೀಕ್ಷೆಯನ್ನು ಕನಸಿನ ತಂತ್ರಗಾರಿಕೆಯನ್ನು ಬಳಸಿಕೊಂಡು ಅದರ ಮೂಲಕವೇ ಅತ್ಮನಿವೇದನೆಯನ್ನು ತೊಡಿಕೊಂಡಿದ್ದಾಳೆ.

ಕಟ್ಟಿಹಾದ ಬಿದಿರಿನಲ್ಲಿ ಮರಳಿ ಕಳಲೆ ಮೂಡಬಲ್ಲುದೇ?
ಸುಟ್ಟ ಮಡಕೆ ಮುನ್ನಿನಂತೆ ಮರಳಿ ಧರೆಯನಪ್ಪಬಲ್ಲುದೆ?
ತೊಟ್ಟು ಬಿಟ್ಟು ಬಿದ್ದ ಹಣ್ಣು ಮರಳಿ ತೊಟ್ಟನಪ್ಪಬಲ್ಲುದೆ?
ಕಷ್ಟಕರ್ಮಿ ಮನುಜರು ಕಾಣದೆ ಒಂದ ನುಡಿದರೆ
ನಿಷ್ಠೆಯುಳ್ಳ ಶರಣರು ಮರಳಿ ಮರ್ತ್ಯಕ್ಕೆ ಬಪ್ಪರೆ
ಚನ್ನಮಲ್ಲಿಕಾರ್ಜುನ[1]

ನಾವು ಮಾತನಾಡುವಾಗ ಅಥವಾ ಕೆಲಸ ಮಾಡುವಾಗ ಅದರ ಗುಣದೋಷಗಳ ಬಗ್ಗೆ ಯೋಚನೆ ಮಾಡಿ ನಿಲುವುಗಳನ್ನು ತೆಗೆದುಕೊಳ್ಳಬೇಕು, ಎಂಬುದನ್ನು ಅಕ್ಕನ ವಚನವು ವಿವರಿಸುತ್ತದೆ. ಇಂತಹ ಹಲವು ರೀತಿಯ ಬದುಕಿಗೆ ಸಂಬಂಧಿಸಿದ ವಚನಗಳನ್ನು ಅಕ್ಕ ರಚಿಸಿ ಅವು ಇಂದಿಗೂ ಪ್ರಚಲಿತದಲ್ಲಿವೆ. ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದಂತೊಡಯ್ಯ, ಎನ್ನುವ ವಚನದಲ್ಲಿ ನಮ್ಮ ಜೀವನದಲ್ಲಿ ಹಲವು ಸಂಕಷ್ಟ, ತೊಡಕುಗಳು ಬಂದಾಗ ಕೋಪವನ್ನು ತಾಳದೆ ಮೌನದಿಂದ ವರ್ತಿಸಬೇಕು ಎಂಬುದು ಅಕ್ಕನ ಆಶಯ.

ದೇಹ ಸ್ಥಿರವಲ್ಲದ ಕಲನ ಭಾದೆಗೊಳಗಗದಿರು ಮನವೆ

ಭೇದ ದುರ್ಗಣವ ನೀ ಗೇರುಬೀಜದಂದದಿ ತಿಳಿಯೊ ಮನವೆ[9]

ಎಂಬ ಕೀರ್ತನೆಯಲ್ಲಿ ಮನಸ್ಸಿನ ಸ್ಥಿರತೆಯನ್ನು, ಹಿಗ್ಗು-ಕುಗ್ಗುವ ಸ್ಥಿತ್ಯಂತ್ಯರಗಳಿಗೆ ಸ್ಪಷ್ಟ ನಿದರ್ಶನವನ್ನು ನೀಡುವಲ್ಲಿ ಗಿರಿಯಮ್ಮನ ಕೀರ್ತನೆ ವ್ಯಕ್ತವಾಗಿದೆ. **ಅನ್ಯರ ಗುಣದೋಷವ ಎಣಿಸದಲೆ ನಿನ್ನಿರವ ನೋಡು ಕಂಡ್ಯ ಮನವೆ.** ಎಂದು ಗಿರಿಯಮ್ಮ ಬೇರೆಯವರ ಗುಣದೋಷಗಳನ್ನು ಎತ್ತು ತೋರಿಸುವ ಮುನ್ನ ನಿನ್ನಲ್ಲಿರುವ ದೋಷಗಳನ್ನು ನೀನು ತಿದ್ದಿಕೊ ಎಂದು ಗಿರಿಯಮ್ಮ ತಿಳಿಯಪಡಿಸುತ್ತಾಳೆ.

೧೨ ನೇಯ ಶತಮಾನದಲ್ಲಿ ಮಾನವೀಯತೆ ಮತ್ತು ವೈಚಾರಿಕತೆಯ ಅಲೆಗಳನ್ನು ಮೂಡಿಸಿದ ಮಹತ್ವದ ಘಟ್ಟ, ಧಾರ್ಮಿಕ ವಿಧಿನಿಷೇದಗಳು, ಸಾಮಾಜಿಕ ಕಟ್ಟುಪಾಡುಗಳು, ಲಿಂಗಜಾತಿಯ ಮಿಥ್ಯ ಬಿಂಬಗಳು ಬಲಹೀನವಾಗಿ ಸಮಾನತೆ ಮತ್ತು ಸಾಮರಸ್ಯದ ಆಶಯಗಳನ್ನು ಬದುಕಿನ ಸೂತ್ರಗಳಾಗಿ ಅಭಿವ್ಯಕ್ತಿಪಡಿಸಿದ್ದಾರೆ. ಶೋಷಿತರ ಉದ್ದಾರ ಮತ್ತು ಸಮಾನ ಸಂಸ್ಕೃತಿಯ ನಿರ್ಮಾಣಕ್ಕಾಗಿ ನಡೆದ ಆಂದೋಲನದಲ್ಲಿ ಸಹಜವಾಗಿಯೇ ಮಹಿಳೆಯರ ಪಾಲುಗಾರಿಕೆಗೆ ಪ್ರಾಶಸ್ತ್ಯ ಸಿಕ್ಕಿತು. ಮೇಲ್ವರ್ಗದ ಸ್ವಾರ್ಥನೀತಿಯನ್ನು ಜಾತಿ ಲಿಂಗಭೇದಗಳ ಅವಾಸ್ತವತೆಯನ್ನು ಖಂಡಿಸಿ ಮನುಷ್ಯ ಸಂಬಂಧಗಳನ್ನು ಶ್ರೇಣಿಕರಣಗೊಳಿಸಿದ ಬಾಹ್ಯ ಸೂತಕಗಳನ್ನು ಅಲ್ಲಗಳೆದರು. ಸ್ತ್ರೀವ್ಯಕ್ತಿತ್ವವನ್ನು ಸುತ್ತುವರೆದಿದ್ದ ವಿಕೃತ ಕಲ್ಪನೆಗಳನ್ನು ವೈಚಾರಿಕ ನೆಲೆಯಲ್ಲಿ ವಿಶ್ಲೇಷಿಸಿದರು. ಶತಮಾನಗಳಿಂದ ಸ್ತ್ರೀ ಅಧೀನತೆಯನ್ನು ಪೋಷಿಸುತ್ತ ಅಸಮಾನತೆಯನ್ನು ಮೌಲ್ಯವಾಗಿಸಿದ ಪುರುಷ ನೈತಿಕತೆಯನ್ನು ಪರಾಮರ್ಶಿಸಿದರು. ಪ್ರಾಕೃತಿಕವಾಗಿರುವ ಸ್ತ್ರೀಪುರುಷರ ಜೈವಿಕ ಭಿನ್ನತೆಗಳನ್ನು ತರತಮವಾಗಿಸಿ ಸ್ತ್ರೀತ್ವವನ್ನು ಗೌಣವಾಗಿಸಿದ ವೈದಿಕ ಚಿಂತನಾಕ್ರಮವನ್ನು ನಿರಾಕರಿಸಿ ಆತ್ಮ ತತ್ವದ ಮೂಲಕ ಸ್ತ್ರೀ ಪುರುಷ ಸಮಾನತೆಯನ್ನು ಪುರಸ್ಕರಿಸಿದ ಕಾಲವಾಗಿ ವ್ಯಕ್ತವಾಯಿತು.

ಅಕ್ಕಮಹಾದೇವಿಯ ವಚನಗಳಲ್ಲಿ ಅಕೆಯ ವೈಯಕ್ತಿಕ ಸಾಧನೆಯ ತೊಳಲಾಟವೇ ಅಧಿಕವಾಗಿದ್ದರೂ ಆಕೆಯ ಆಧ್ಯಾತ್ಮಿಕ ಆಶಯವನ್ನು ದೃಢಗೊಳಿಸಿದ ಧಾರ್ಮಿಕ, ತಾತ್ವಿಕ ವಿಚಾರಗಳು ಹಲವು ವಚನಗಳಲ್ಲಿ ಪ್ರಕಟವಾಗಿದೆ. ಧರ್ಮತತ್ವಗಳು, ಜಗತ್ತು ದೇವರು, ಷಟ್ ಸ್ಥಳ ಅನಾವರಣ, ಗುರುಲಿಂಗ ಜಂಗಮ ಇತ್ಯಾದಿ, ಸೈದಾಂತಿಕ ತಾತ್ವಿಕ ವಿವೇಚನೆ, ಶರಣಸತಿ ಲಿಂಗಪತಿಯ ಆಧ್ಯಾತ್ಮಿಕ ವಿವರಣೆಯಲ್ಲಿ ಅಕ್ಕನ ತಾತ್ವಿಕ ಸ್ಪಷ್ಟತೆ ಸೈದಾಂತಿಕ ತಿಳುವಳಿಕೆಯನ್ನು ನೋಡಬಹುದು.

ಗಿರಿಯಮ್ಮಳು ತನ್ನ ಕೀರ್ತನೆಗಳಲ್ಲಿ ಕಳಂಕ ಹೊತ್ತ ಸ್ತ್ರೀಯ ಚಿತ್ರಣ, ಹೆಣ್ಣಿನ ಅನ್ಯೆತಿಕ ಸಂಬಂಧ, ಅಧಿಕಾರಶಾಹಿಯಲ್ಲಿರುವ ಕೌರ್ಯ ಸುವ್ಯಕ್ತ, ಹೆಣ್ಣಿನ ಸ್ವಾತಂತ್ರ್ಯದ ಬಗ್ಗೆ ಇಂತಹ ಸ್ತ್ರೀಸಂವೇದಿತ ಅಂಶಗಳನ್ನು ಅಳವಡಿಸಿಕೊಂಡು ಕೀರ್ತನೆಗಳನ್ನು ರಚಿಸಿದ್ದಾರೆ. ಇಂತಹ ಕಿರ್ತನೆಗಳು ಇಂದಿಗೂ ಸ್ತ್ರೀ ಸಂಬಂಧಿತ ಶೋಷಣೆಯ ಬಗೆಗೆ ಸಮರ್ಥನೆಯನ್ನು ಓದಗಿಸುತ್ತವೆ.

**೬.೨) ಪ್ರಕೃತಿಯೊಂದಿಗಿನ ಸಂಬಂಧ:-**

ಅಕ್ಕಮಹಾದೇವಿಯ ವಚನಗಳಲ್ಲಿ ಈ ಭಾಗವು ಅತ್ಯಂತ ಮಹತ್ವ ಪೂರ್ಣವಾಗಿದ್ದಾಗಿದೆ ಎನ್ನಬಹುದು. ಲೌಕಿಕದ ಕುಟುಂಬ ರಚನೆಯ ಸ್ವರೂಪಗಳು ವ್ಯಕ್ತಿಯ ಮೇಲೆ ತರುವ ಒತ್ತಾಯಗಳಿಂದಾಗಿ ಹೊಸ ವಾತಾವರಣವೊಂದರಲ್ಲಿ ಈ ಆಶಯಗಳ ಸಾಫಲ್ಯಕ್ಕಾಗಿ ಅಕ್ಕ ಮಹಾದೇವಿಯು ನಡೆಸಿದ

ಹುಡುಕಾಟಗಳು. ಅವಳ ವಚನಗಳಲ್ಲಿನ ಒಂದನೆಯ ವಲಯದಲ್ಲಿ ಅವಳು ಶರಣರ ಸಂಬಂಧದಲ್ಲಿ ಈ ತನ್ನ ಆಶಯದ ಗಳಿಕೆಗಾಗಿ ಅರಸುತ್ತಾಳೆ. ಎರಡನೆಯ ವಲಯ ಇವಳು ಪ್ರಕೃತಿಯಲ್ಲಿ ತನ್ನ ಪ್ರೇಮದ ಸ್ವರೂಪದ ಆಶಯವನ್ನು ಹುಡುಕಲು ಯತ್ನಿಸುತ್ತಾಳೆ.

ಅಕ್ಕಮಹಾದೇವಿಯದು ನಿರಂತರ ಹುಡುಕಾಟವೇ ಆಗಿರುವುದು ಇಲ್ಲಿ ಗಮನಿಸಬೇಕಾದ ಒಂದು ಅಂಶ. ವ್ಯಕ್ತಿ ಹಾಗೂ ಅವನ ಬದುಕಿನಲ್ಲಿ ಕೈಗೂಡಬೇಕಾದ ಆಶಯ, ಅಭೀಪ್ಸೆಗಳನ್ನು ಅಕ್ಕಮಹಾದೇವಿಯು ಅನುಭಾವದ ಬಯಕೆಯಲ್ಲಿ ಅರಸಲು ಪ್ರಯತ್ನಿಸಿದ್ದಾಳೆ. ಹಿಂದೆ ವಿವರಿಸಿದ ಹಾಗೆ ಇವಳ ಹುಡುಕಾಟವೇ ಪ್ರಕೃತಿಯಲ್ಲಿ ಶರಣರಲ್ಲಿ ಹೀಗೆ

ಗಿರಿಯೊಳು ವನದೊಳು ಗಿಡಗಿಡದತ್ತ
ದೇವ ಎನ್ನದೇವ ಬಾರಯ್ಯ ತೊರಯ್ಯ ನಿಮ್ಮ ಕರುಣವನೆಂದು
ನಾನು ಅರಸುತ್ತ ಅಳಲುತ್ತ ಕಾಣದೆ ಸುಯಿದು ಬಂದು ಕಂಡೆ
ಶರಣರ ಸಂಗದಿಂದ ಅರಸಿ ಹಿಡಿದಿಹನೆಂದು
ನೀವಡಗುವ ಠಾವ ಹೇಳು, ಚನ್ನಮಲ್ಲಿಕಾರ್ಜುನ[1]

ಈ ವಚನವು ಅಕ್ಕಮಹಾದೇವಿಯ ದ್ವಂದ್ವವನ್ನು ಸೂಚಿಸುತ್ತದೆ. ಪ್ರಕೃತಿಯ ನೆಲೆಗಳಲ್ಲಿ ಹುಡುಕಾಟ ಹಾಗೂ ಶರಣರ ಸಂಗದಲ್ಲಿ ಹುಡುಕಾಟ ಇವೆರಡೂ ಅರಸುವ ತಾಣಗಳಾಗಿರುವಂತೆಯೇ ಕೊನೆಯಲ್ಲಿ ಇವಳಿಗೆ ಒಂದು ಪ್ರಶ್ನೆಯು ಕಾಡುತ್ತಲೇ ಇದೆ, ನೀಡಗುವ ಠಾವ ಹೇಳಾ

ಗಿರಿಯಮ್ಮಳು ಕೂಡ ಪ್ರಕೃತಿಯ ಜೊತೆಗೆ ತನ್ನ ಒಡನಾಟವನ್ನು ಇಟ್ಟುಕೊಂಡಿದ್ದು ತನ್ನ ವಿಷ್ಣುವಿನ ಹುಡುಕಾಟದಲ್ಲಿ ಕಾಲಕಳೆಯುವುದನ್ನು ನೋಡಬಹುದು.

ಮಳೆಯ ದಯಮಾಡೊ ರಂಗಯ್ಯ ನಿಮ್ಮ
ಕರುಣ ತಪ್ಪಿದರೆ ಉಳಿಯದೀ ಲೋಕ
ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿಗೆ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛಗೊಂಡು
ದೆಸೆದೆಸೆಗೆ ಬಾಯಿ ಬಿಡುತಿಹವಯ್ಯ ಹರಿಯೆ[2]

ಗಿರಿಯಮ್ಮಳು ತನ್ನ ದೈವವಾದ ಹೆಳವನಕಟ್ಟೆ ರಂಗಯ್ಯನಲ್ಲಿ ಬೇಡಿಕೆಯನ್ನು ಇಡುತ್ತಾಳೆ. ಮಳೆಯನ್ನು ಬರಿಸು ಎಂದೂ ಮಳೆಯಿಲ್ಲದೇ ಕೆರೆಗಳು ಬತ್ತಿದ್ದು, ಪ್ರಾಣಿ ಪಕ್ಷಿ ಸಂಕುಲಗಳು ನೀರಿಲ್ಲದೇ ತಲ್ಲಣಿಸಿ ಮೂರ್ಛೆಹೋಗಿದ್ದು, ಮಳೆಯನ್ನು ಕರುಣಿಸು ಎಂದು ಗಿರಿಯಮ್ಮ ರಂಗಯ್ಯನಲ್ಲಿ ಬೇಡುತ್ತಿದ್ದಾಳೆ.

ಮೇರುಗಿರಿಯ ಪರ್ವತದ ತುದಿಯಲ್ಲಿ ಮೈದೋರುವ ಭಾಸ್ಕರನಂತೆ
ಬೀರುವ ಕೆಂಪಿನ ತಳಿರ ಹಾಸಿಕೆಗಳು ಚಾರುಹಾಸಿಗೆ ಆದವಲ್ಲಿ[೮]
ಪೊಳಕುವ ಮೀನುಗಳ್ ನೀಲಕುಂತಳವು ಕಳಕಳಿಸುವ ಕೆಂದಾವರೆ ಮೊಗ್ಗು
ಅರಳಿದಂಬುಜ ತಾರೆಗಳು ಕೋಮಲೆಯರ ನೀರಾಟವನೆ ಕಂಡುಹರುಷದಿ

ಚಂದ್ರಹಾಸನ ಕಥೆಯ ಕೀರ್ತನೆಗಳಲ್ಲಿ ಗಿರಿಯಮ್ಮಳು ಚಂದ್ರಹಾಸ ಒಂಟಿಯಾಗಿ ಕಾಡಿನಲ್ಲಿರುವಾಗ, ಸಖಿಯರು ನೀರಿನಲ್ಲಿ ಆಟವಾಡುವ ಸಂದರ್ಭಗಳನ್ನು ಪ್ರಕೃತಿ ಮತ್ತು ಪ್ರಾಣಿಗಳಿಗೆ ಹೋಲಿಸಿ ಹಾಡನ್ನು ಬರೆದಿದ್ದಾಳೆ. ಬಾಲಚಂದ್ರಹಾಸನನ್ನು ಕುರಿತ ವರ್ಣನೆಗಳು ಬೇಟೆಯ ವರ್ಣನೆ, ಕಾಡಿನಲ್ಲಿ ಬೆರಳನ್ನು ಕೂಯ್ಯಿಸಿಕೊಂಡು ಒಂಟಿಯಾಗಿ ಅಳುತ್ತಿದ್ದ ಚಂದ್ರಹಾಸನನ್ನು ಕಾಡಿನ ಮೃಗಪಕ್ಷಿಗಳು ಉಪಚರಿಸುವ ತನ್ನ ಕಥೆಗಳಲ್ಲಿ ಪ್ರಸ್ತಾಪಿಸಿದ್ದಾಳೆ.

ಅಕ್ಕಮಹಾದೇವಿ ಚನ್ನಮಲ್ಲಿಕಾರ್ಜುನನ್ನು ಹುಡುಕುತ್ತಾ ಹೋಗುವಂತಹ ಸಂದರ್ಭದಲ್ಲಿ ಪ್ರಕೃತಿಯ ಜೊತೆ ತನ್ನ ವೇದನೆಯನ್ನು ಹೇಳಿಕೊಳ್ಳುತ್ತಾಳೆ. ಚಿಲಿಪಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೋ? ನನ್ನ ಚನ್ನಮಲ್ಲಿಕಾರ್ಜುನನ್ನು ನೀವು ಬಲ್ಲಿರಾ, ಎಂದು ಅಕ್ಕಮಹಾದೇವಿ ಕೇಳುತ್ತಾಳೆ. ಸಾಹಿತ್ಯದ ಅಭಿವ್ಯಕ್ತಿಗೆ ಮೂಲ ಆಕರವಾಗಿ ವಸ್ತುವಾಗಿ ಪ್ರಕೃತಿ ಕೆಲಸ ಮಾಡುವುದನ್ನು ಸರ್ವೆಸಾಮಾನ್ಯವಾಗಿ ಪ್ರಕೃತಿಯಲ್ಲಿ ತಮ್ಮ ಸಾಹಿತ್ಯದಲ್ಲಿ ಅಳವಡಿಸಿಕೊಂಡಿರುತ್ತಾರೆ.

ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೇವಣೆ
ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ
ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪರುಷಮೃಗ
ಎಡರುವ ಹರಳೆಲ್ಲ ಚಿಂತಾಮಣಿ
ಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ
ನೋಡುತ ಬಂದು ಕದಳಿಯ ಬನವ ಕಂಡೆ ನಾನು[೯]

ಅಕ್ಕಮಹಾದೇವಿಯು ಪ್ರಕೃತಿಯ ವರ್ಣನೆಯಲ್ಲಿ ಮೇಲಿನ ವಚನದಲ್ಲಿ ವರ್ಣಿಸಿದ್ದಾಳೆ, ಕದಳಿಯ ಸೌಂದರ್ಯವನ್ನು ವರ್ಣಿಸುತ್ತಾ ಗಿಡಮರ ಜಲಮೃಗಗಳನ್ನು ಹೋಲಿಸಿದ್ದಾಳೆ.

ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮಳು ತನ್ನ ವಚನಸಾಹಿತ್ಯ ಮತ್ತು ಕೀರ್ತನೆಗಳಲ್ಲಿ ಪ್ರಕೃತಿಯ ಬಗೆಗಿನ ತಮ್ಮ ನಿಲುವುಗಳನ್ನು ಮತ್ತು ಅದನ್ನು ಸಾಹಿತ್ಯದಲ್ಲಿ ಬಳಸಿಕೊಂಡ ರೀತಿಯನ್ನು ನೊಡಬಹುದು. ಚನ್ನಮಲ್ಲಿಕಾರ್ಜುನನ್ನು ಹುಡುಕುವ ಸಂದರ್ಭದಲ್ಲಿ ಪ್ರಾಣಿಪಕ್ಷಿಗಳ ಜೊತೆ ಅಕ್ಕ ಮಾತನಾಡುತ್ತ ನನ್ನ ದೇವರನ್ನು ನೀವು ಕಂಡೀರಾ? ಎಂದು ಕೇಳುತ್ತಾಳೆ. ತನ್ನ ವಿರಹದ ವೇದನೆಯನ್ನು ತಾಳಲಾರದೇ ತನ್ನ ವ್ಯಥೆಯನ್ನು ಪ್ರಕೃತಿಯ ಮುಂದೆ ತೋಡಿಕೊಳ್ಳುತ್ತಾಳೆ. ಗಿರಿಯಮ್ಮಳು ಕೂಡ ತನ್ನ ಹಾಡುಗಳಲ್ಲಿ ಪ್ರಕೃತಿಯ ವರ್ಣನೆಯನ್ನು ಮಾಡಿದ್ದಾಳೆ. ಸೀತಾಕಲ್ಯಾಣ, ಚಂದ್ರಹಾಸನ ಕಥೆ, ಲವಕುಶರ ಕಾಳಗ ಅಲ್ಲದೇ ಕೀರ್ತನೆಗಳಲ್ಲಿಯೂ ಕೂಡ ಪ್ರಕೃತಿಯ ಬಗೆಗಿನ ಸಂಬಂಧವನ್ನು ಕಾಣಬಹುದು.

## ೬.೩)ಸೈದ್ಧಾಂತಿಕ ಭಾಷಾ ನಿರೂಪಣೆ:-

ಸಾಮಾನ್ಯವಾಗಿ ಜನರು ಆಡುವ ಮಾತು ನುಡಿ, ಬರೆಯುವ ಬರಹ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವ ಧ್ವನಿ ಇದನ್ನು ಭಾಷೆ ಎನ್ನುತ್ತಾರೆ. ಭಾಷೆಯ ಬಗ್ಗೆ ವೈಜ್ಞಾನಿಕವಾಗಿ ಖಚಿತವಾಗಿ ಹೇಳುವುದು ಕಷ್ಟ ಸಾಧ್ಯ. ಈ ದಿಸೆಯಲ್ಲಿ ಅನಾದಿ ಕಾಲದಿಂದಲೂ ವಿದ್ವಾಂಸರು ಅಧ್ಯಯನ ನಡೆಸುತ್ತಲೇ ಬಂದಿದ್ದಾರೆ. ಮಾನವರು ಮಿಕ್ಕೆಲ್ಲಾ ಪ್ರಾಣಿವರ್ಗದ ಪ್ರತ್ಯೇಕಗೊಂಡಿರುವುದು ತಮಗಿರುವ ಬುದ್ಧಿಶಕ್ತಿಯ ಬಲದಿಂದ ಮಾನವರು ಭಾಷೆಯನ್ನು ರೂಪಿಸಿಕೊಂಡು ಮುನ್ನೆಡೆಯಲು ಸಾಧ್ಯವಾಗಿದ್ದರೆ ಭಾಷೆ ಸ್ವಾಭಾವಿಕವಾಗಿ ಮೂಡಿ ಬರುವಂತಹದಲ್ಲ. ಅದು ಕಲಿಕೆಯಿಂದ ಸಂವಹನ ಕ್ರಿಯೆ ನಡೆಸಲೂ ಸಾಧ್ಯವಾಗಿಸಿದೆ. ಭಾಷೆಯ ವ್ಯಕ್ತಿ, ಕುಟುಂಬ, ಸಮುದಾಯ, ಸಮಾಜ ಪ್ರದೇಶದಲ್ಲಿನ ನಿರ್ದಿಷ್ಟ ಪರಿಸರದ ಪರಸ್ಪರ ಒಪ್ಪಿಗೆಯ ಮತ್ತು ರೂಢಿಯಿಂದ ಬಂದ ಒಂದು ವ್ಯವಸ್ಥೆಯಾಗಿದೆ. ಸಾಹಿತ್ಯದಲ್ಲಿ ಅಕ್ಕ ಮತ್ತು ಗಿರಿಯಮ್ಮಳು ಭಾಷೆಯನ್ನು ಬಳಸಿಕೊಂಡಂತಹ ರೀತಿ, ಭಾಷಾಶೈಲಿಯ ಬಗ್ಗೆ ತಿಳಿಯಬೇಕಾದದ್ದು ಅನಿವಾರ್ಯವಾಗಿದೆ.

ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮಳು ತಮ್ಮ ಸಾಹಿತ್ಯ ರಚನೆಯನ್ನು ಸರಳ, ಅರ್ಥವಾಗುವ ಭಾಷೆಯಲ್ಲೇ ರಚನೆ ಮಾಡಿದ್ದಾರೆ. ಭಾಷಾ ನಿರೂಪಣೆಯು ವಚನ, ಕೀರ್ತನಾ ಸಾಹಿತ್ಯದಲ್ಲಿ ಸೈದಾಂತಿಕ ನೆಲೆಯಲ್ಲಿ ಸೂತ್ರಬದ್ಧವಾಗಿ ಅನುರಣನಗೊಳ್ಳುತ್ತಲಿರುವುದನ್ನು ನೋಡಬಹುದು.

ಹಾವಿನ ಬಾಯ ಹಲ್ಲ ಕಳೆದು
ಹಾವಾನಾಡಿಸಬಲ್ಲಡೆ
ಹಾವಿನ ಸಂಗವೇ ವಿವರಿಸಬಲ್ಲಡೆ
ಕಾಯದ ಸಂಗವೇಲೇಸು ಕಂಡಯ್ಯ
ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚನ್ನಮಲ್ಲಿಕಾರ್ಜುನಯ್ಯ
ನೀನೊಲಿದವರು ಕಾಯಗೊಂಡಿದ್ದರೆನಬೇಡ[೧೦]

ಕಾಯದೊಳಗೆ ಅಕಾಯವಾಗಿ, ಜೀವದೊಳಗೆ ನಿರ್ಜೀವವಾಗಿ, ಭಾವದೊಳಗೆ ನಿರ್ಭಾವವಾಗಿ ಮನಬುದ್ಧಿ ಭಾವದಲ್ಲಿ ಅನುಭಾವದ ಆಶಯವೇ ತುಂಬಿಕೊಂಡಿದ್ದನ್ನು ಪರಿಚಯವಾಗಿ ಕಾಯಾತೀತ ನೆಲೆಯಲ್ಲಿ ತಿಳಿಸಿದ್ದಾಳೆ. ಅಕ್ಕಳು ಸೈದಾಂತಿಕ ನೆಲೆಯಲ್ಲಿ ಭಾಷೆ ಬಳಕೆಯನ್ನು ಅನುಸರಿಸಿ ಅರ್ಥವಿಸ್ತಾರತೆಯನ್ನು ಮತ್ತು ಅದರ ವ್ಯಾಪ್ತಿಯನ್ನು ತಿಳಿಯುವ ಹಾಗೆ ಮಾಡಿದ್ದಾರೆ.

ಗಿರಿಯಮ್ಮಳು ತನ್ನ ಚಂದ್ರಹಾಸನ ಕಥೆ ಯ ಕೀರ್ತನೆಗಳಲ್ಲಿ ಚಂದನವತಿ ಪಟ್ಟಣದ ಪುಳಿಂದನಿಗೆ ಶಿಶು ಚಂದ್ರಹಾಸ ದೊರೆತಾಗ ಉಂಟಾದ ಆನಂದವನ್ನು

ಕತ್ತಲಮನಿಗೆ ದೀವಿಗೆಯನ್ನಿತ್ತಂತೆ ದೇ
ವೋತ್ತಮ ಕವಿಗಳಿಗೆ ಚಿತ್ತಕ್ಕೆ ಚದುರನುಡಿಗಳು ದೊರಕಿದ ಹಾಗೆ
ಬತ್ತಿದ ಕೆರೆ ತುಂಬಿದಂತೆ[೧೧]

ಎಂದು ಹಲವು ದೃಷ್ಟಾಂತಗಳ ಮೂಲಕ ವಿವರಿಸಲಾಗಿದೆ.

ಚಿತ್ತಕ್ಕೆ ಚದುರನುಡಿಗಳು ದೊರಕಿದ ಹಾಗೆಂಬ ಮಾತು ಈಕೆಯ ಕೃತಿಗೆ ಅನ್ವಯಿಸುತ್ತದೆ. ಕಥಾಗತಿಯಲ್ಲಿ ಯಾವುದೇ ವ್ಯತ್ಯಾಸ ಕಂಡುಬರದು. ಚಂದ್ರಹಾಸ ಶ್ರೀ ಹರಿಯ ಕೃಷ್ಣೆಯಿಂದ ದುಷ್ಟ ಬುದ್ಧಿ ಹೂಡಿದ ಸಂಚಿನಿಂದ ಪಾರಾದುದಲ್ಲದೆ ವಿಷಯೆಯನ್ನು ವಿವಾಹವಾಗಿ, ಸೆರೆಯಲ್ಲಿದ್ದ ತಂದೆತಾಯಿಗಳನ್ನು ಬಿಡಿಸಿ ರಾಜ್ಯವನ್ನು ಮರಳಿ ಪಡೆಯುವವರೆಗೆ ಕೃತಿ ನಿರಾಂತಕವಾಗಿ ಸಾಗುತ್ತದೆ. ಇಲ್ಲಿ ಬರುವ ಕೆಲವೊಂದು ನಂಬಿಕೆಗಳು ಸಂಪ್ರದಾಯಗಳು ಸಾಂಸ್ಕೃತಿಕವಾಗಿ ಭಾಷಾ ರಚನೆ ಮತ್ತು ಬಳಕೆ ಪ್ರಮುಖವಾಗಿ ರೂಪಿತವಾಗಿದೆ.

ಭಾಷೆಯ ತಾನು ಮಾಡಿದ ಆಲೋಚನೆಗಳನ್ನು ಅನುಭವಗಳನ್ನು ಅಭಿವ್ಯಕ್ತಿಪಡಿಸಲು ಮತ್ತು ವಿಸ್ತರಿಸಲು ತುಂಬಾ ಸಹಕಾರಿಯಾಗಿದೆ. ಭಾವ ಪೋಷಕವೂ ಆಗಿರುವುದರಿಂದ ಮನುಷ್ಯನು ವಿಚಾರ, ಆಲೋಚನೆ ಸುಖ ಸಂತೋಷಗಳು ಅವನ ಮನಸ್ಸಿನೊಂದಿಗೆ ಭಾಷೆಯನ್ನು ಅವಲಂಬಿಸಿದೆ. ಅಕ್ಕ ಮತ್ತು ಗಿರಿಯಮ್ಮಳು ಭಕ್ತಿ ಮತ್ತು ವಿರಹ ಪ್ರಣಯ ಸಂಬಂಧಿ, ಪ್ರೀತಿ ವಿಶ್ವಾಸಗಳು ಭಾಷೆಯ ಜೊತೆಗೆ ಸಂಪರ್ಕವನ್ನು ಹೊಂದಿದೆ. ಆ ಭಾಷೆ ಪ್ರೌಢವಾಗಿದ್ದು ವ್ಯಕ್ತಪಡಿಸುವ ಶೈಲಿ ವಿಶಿಷ್ಟವಾಗಿದೆ. ಭಾಷೆಯಲ್ಲಿ ಭಾವನೆ ಚಿಂತನೆ ಪ್ರತಿಭಾಶಕ್ತಿ ಈ ಎಲ್ಲಾ ಶಕ್ತಿಗಳು ಸಮ್ಮಿಳಿತವಾಗಿರುತ್ತವೆ. ಅಂತಹ ಭಾಷೆಯ ನಿರೂಪಣೆಯು ಭಾವನೆಗಳ ಜೊತೆ ಸಂಪರ್ಕವನ್ನೇರ್ಪಡಿಸಿ ಅವುಗಳನ್ನು ಪೋಷಣೆ ಮಾಡಿ ಮಾನವನ ಅಂತರಾಳದ ಅನಿಸಿಕೆಗಳನ್ನು ಅನುಭವಗಳನ್ನು ವ್ಯಕ್ತಪಡಿಸಲು ಉತ್ತಮ ಸಾಧನವಾಗಿ ಸಹಕರಿಸುತ್ತದೆ.

ಅಂತಹ ಭಾಷೆಯ ಜ್ಞಾನಾರ್ಜನೆ ಸಾಹಿತ್ಯಾಭಿರುಚಿ, ಅಂತರ್ ದೃಷ್ಟಿಗಾಗಿ ಮತ್ತು ಆನಂದಕ್ಕಾಗಿ ಅನುಕೂಲಿತವಾಗುವಂತೆ ಸಾಹಿತ್ಯ ಸೃಷ್ಟಿಯನ್ನು ಮಾಡುತ್ತದೆ. ಪದ ಸಂಪತ್ತನ್ನು ವೃದ್ಧಿಸಿಕೊಂಡು ಉಚ್ಚಾರಣೆಯನ್ನು ಸ್ಪಷ್ಟಗೊಳಿಸಿಕೊಂಡು ಭಾಷೆಯನ್ನು ದೋಷರಹಿತವಾಗಿ ನಿಖರವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸುವ ಸಾಮಾರ್ಥ್ಯಗಳನ್ನು ಹೆಚ್ಚಿಸಬಹುದು. ಸೌಂದರ್ಯಪ್ರಜ್ಞೆ, ಸ್ವಂತಿಕೆ ಮತ್ತು ಸೃಜನಾತ್ಮಕ ಶಕ್ತಿಯನ್ನು ಬೆಳಸಿ ಸಾಹಿತ್ಯ ರಚನೆ ಮಾಡುವಂತೆ ಪ್ರೇರಪಿಸುತ್ತದೆ.

ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಮೃದುಮಧುರ ಭಾಷೆಯನ್ನು ಗಹನವಾದುದನ್ನು ಭಾವಭೇದವಾಗಿಸುವುದು ಮಹಾದೇವಿಯಕ್ಕನ ವಚನಗಳ ವೈಶಿಷ್ಟ. ಸಹಜ ಸುಂದರ ಉಪಮೆ, ರೂಪಕ, ಆಕರ್ಷಕ ಶಬ್ದ ಚಿತ್ರಗಳಲ್ಲಿ ಅಮೂರ್ತ ವಿಚಾರಗಳನ್ನು ಮೂರ್ತಗೊಳಿಸುವ ರೀತಿ ಪರಿಣಾಮಕಾರಿಯಾಗಿದೆ. ಸರ್ವವ್ಯಾಪಕವಾದ ಪರತತ್ವದ ಅಗೋಚರ ಅವ್ಯಕ್ತ ಸ್ವರೂಪವನ್ನು **ನೆಲೆಯ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯ ಮರೆಯ ಹೇಮದಂತೆ, ತಿಲಕ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ,** ಎಂದು ಹೊರಪ್ರಪಂಚದ ಭೌತಿಕ ಉಪಮೆಗಳಿಂದ ಭಾವದ ಮರೆಯ ಬ್ರಹ್ಮನಾದ ಅಸ್ತಿತ್ವವನ್ನು ಧ್ವನಿಸುವ ರೀತಿಯ ಅನುಪಮವಾಗಿದೆ.

ಕಲ್ಲ ಬಿತ್ತಿ ನೀರನೆರದಲ್ಲಿ ಪಲ್ಲವಿಸುವುದೆ ದಿಟದ ಬೀಜದ ವೃಕ್ಷದಂತೆ.

ಕಾಮಧೇನು ಕರೆವಡೆ ಕರುವಿನ ಹಂಗೇಕೆ?

ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ **–ಅಕ್ಕಮಹಾದೇವಿ**

ಸರಳು ತಾಗಿದ ಹುಲ್ಲೆಯಂದದಿ, ಬೇಡನ ಬಲೆಗೆ ಸಿಲ್ಕಿದ ಪಕ್ಷಿಯಂತೆ.

ಚಿಪ್ಪಿನೊಳಗೆ ಮುತ್ತು ಮೂಡುವ ತೆರನಂತೆ,

ಹೆಚ್ಚಾಗಿ ಅರಿಯೆನು ಹೆಣ್ಣು ಬಾಲೆಯು ನಾನು

ಅಚ್ಚ ಚಾತುರ್ಯದ ಪದನ, **–ಹೆಳವನಕಟ್ಟೆ ಗಿರಿಯಮ್ಮ**

ಪುನರುಕ್ತಿ, ಪ್ರಾಸಾನುಪ್ರಾಸ, ಸಂಯೋಜನೆ, ಸೂತ್ರಬದ್ಧ ಲಯ ವಿನ್ಯಾಸದಲ್ಲಿ ರಚನೆಯಾಗಿರುವ ಅನೇಕ ವಚನಗಳಲ್ಲಿ ಪ್ರತಿಭೆ ಮಿಂಚಿದೆ. ಭಾವ ಭಾಷೆಯ ಸಾಂಗತ್ಯದಿಂದ ಕೂಡಿದ ಕಾವ್ಯಮಯ ಕೀರ್ತನೆಗಳು ಗಿರಿಯಮ್ಮನ ಸಾಹಿತ್ಯದಲ್ಲಿ ಮುಖ್ಯಘಟ್ಟವಾಗಿದೆ.

ಮಹಾದೇವಿಯಕ್ಕನಲ್ಲಿ ಲೋಕಾನುಭವವಿದೆ. ಗಿರಿಯಮ್ಮನಲ್ಲಿ ಪುರಾಣೇತಿಹಾಸಗಳ ಪ್ರತಿಭೆಯಿದೆ, ಅರ್ಥಭರಿತ ಸೂತ್ರೋಕ್ತಿ, ಅನುಭವೋಕ್ತಿಗಳ ಮೂಲಕ ಜೀವಾನುಭವವನ್ನು ಕೆನೆಗಟ್ಟಿಸಿರುವಲ್ಲಿ ಮಹಾದೇವಿಯಕ್ಕನ ಕಲೆ ಜೀವನದರ್ಶನಕ್ಕೆ ಸಾಕ್ಷಿಯಾಗಿದೆ. ನಂಬಿದ ಆದರ್ಶಕ್ಕಾಗಿ ನಿರಂತರವಾಗಿ ಹಂಬಲಿಸುತ್ತ ಬದುಕಿನ ಬಿಸಿಲ ಬೆಳದಿಂಗಳನ್ನು ಕಾವ್ಯವಾಗಿಸಿದ್ದು ಅಕ್ಕನ ಅನನ್ಯ ಸಾಧನೆ. ವಚನಾಭಿವ್ಯಕ್ತಿಯ ಅಪೂರ್ವ ಸಾಧನೆಯನ್ನು ಭಾವ ಭಾಷೆಯ ಸಿದ್ಧಿಯನ್ನು ಕುರಿತಂತೆ ಆಕೆಯ ಅಕ್ಕನ ಸಾಹಿತ್ಯ ಪ್ರತಿಭೆಯ ಉನ್ನತಿ ಪಡೆದಿದೆ. ಕೀರ್ತನೆಗಳು ಭಿನ್ನವಾದ ಭಾಷೆ, ಶೈಲಿ ಮತ್ತು ರೂಪಕ ಪ್ರತಿಮೆಯನ್ನು ಒಳಗೊಂಡಿದ್ದರೂ ಅಂತಸತ್ವ ಮತ್ತು ಭಾವವಿವೇಚನೆಯಲ್ಲಿ, ಮನರಂಜನಾಸ್ವರೂಪಿಯಾಗಿ ರಚನೆಯಾಗಿರುವಂತಹವು. **ನಡೆನುಡಿ ಶುದ್ಧವಿಲ್ಲದವರ ಅನುಭಾವವು ಹಂದಿ ಕರ್ಪೂರವ ತಿಂದು ಎಲ್ಲರಿಗೆ ಮುತ್ತುಕೊಟ್ಟ ತೆರನಾದರೆ, ನಡೆನುಡಿ ಶುದ್ಧವುಳ್ಳವರ ಅನುಭಾವವು ಊರ್ವಶಿ ಕರ್ಪೂರವ ತಿಂದು ಎಲ್ಲರಿಗೆ ಮುತ್ತು ಕೊಟ್ಟಂತೆ,** ಅಪ್ಯಾಯಮಾನ ಎನ್ನುವ ಚಮತ್ಕಾರಿ ಭಾಷೆಯ ಮಾತುಗಳು ವಿನೂತನವಾಗಿವೆ.

## ಅಡಿ ಟಿಪ್ಪಣಿ

೧. ಎಚ್ ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬, ಪುಟ: ೮೮

೨. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೧೫೭

೩. ಡಾ॥ ವೆಂಕಟಗಿರಿ ದಳವಾಯಿ, ನಾನು ನೀನು ಆನು, ಗೌತಮಪ್ರಕಾಶನ, ಬಾಗಲಕೋಟೆ, ಮುದ್ರಣ ೨೦೦೫, ಪುಟ: ೧೫೬ ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ, ೨೦೧೨, ಪುಟ: ೭೯

೪. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೧೫೭

೫. ಡಾ॥ ಆರ್ ಸಿ ಹಿರೇಮಠ್, ಶಿವಶರಣೆಯರ ವಚನಗಳು, ಮಹಾದೇವಿಯಕ್ಕನ ವಚನಗಳು, ವಚನ ಸಂಖ್ಯೆ:೨೩೦

೬. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪುಟ: ೨೬

೭. ಅದೇ ಪುಟ: ೧೦೯

೮. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮುದ್ರಣ,೨೦೧೨, ಪುಟ: ೧೩

೯. ಎಚ್ ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬, ಪುಟ: ೮೪

೧೦. ಅದೇ ಪುಟ: ೧೯೬

**೫)ಸಮಾರೋಪ:-**

ಸ್ತ್ರೀ ಗೆ ಕೂಡಾ ಶರೀರ ಇದೆ,ಅದಕ್ಕೆ ವ್ಯಾಯಾಮ ಕೊಡಬೇಕು

ಅವಳಿಗೂ ಮೆದುಳಿದೆ, ಅದಕ್ಕೆ ಜ್ಞಾನ ಕೊಡಬೇಕು

ಅವಳಿಗೂ ಹೃದಯವಿದೆ, ಅದಕ್ಕೆ ಅನುಭವ ಕೊಡಬೇಕು

ಹೆಣ್ಣನ್ನು ಜೈವಿಕ ಕ್ರಿಯೆಯಾಗಿಯೇ ಕಾಣುವ, ಆಕೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಬೆಳೆಸುವ ತೆಲುಗು ಕವಿ ಚಲಂ ನ ಮಾತುಗಳು ಹೆಣ್ಣಿನ ಪರಿವರ್ತನೆತನ್ನು ಸ್ಥಾನ ನಿರ್ಧಾರವನ್ನು ಸೂಚಿಸುತ್ತದೆ. ಅವಕಾಶಗಳು, ಜ್ಞಾನ, ಅನುಭವಗಳು ಹೆಣ್ಣಿನ ನಿರ್ಣಾಯಕ ಅಂಶಗಳಾಗಿ ಕಂಡುಬರುತ್ತವೆ. ಗ್ರಾಮೀಣ ಪ್ರದೇಶದ ಗಾಢ ಅನುಭವಗಳನ್ನು ಹೊಂದಿರುವ ಹಾಗೂ ಮಾರ್ಕ್ಸವಾದದ ಹಿನ್ನೆಲೆಯಲ್ಲಿರುವ ವಿಚಾರಗಳನ್ನು ಗಮನಿಸಬೇಕು.

ಮಹಿಳೆ ಶತಮಾನಗಳುದ್ದಕ್ಕೂ ಅವಕಾಶಗಳಿಂದ ವಂಚಿತಳಾಗಿದ್ದು ಇಂದು ಮುಕ್ತ ಆರ್ಥಿಕ ನೀತಿಯ ಕಾರಣಕ್ಕಾಗಿ ಎಲ್ಲ ಕ್ಷೇತ್ರಗಳಲ್ಲಿ ಪ್ರವೇಶಿಸಿಸುತ್ತಾಳೆ. ಮಹಿಳೆ ಕೇವಲ ದೈಹಿಕ ಜೈವಿಕ ಕ್ರಿಯೆಯಷ್ಟೇ ಅಲ್ಲ, ಇದರಾಚೆ ಗ್ರಹಿಸಬಹುದಾದ ಒಂದು ಮನಸ್ಥಿತಿ, ಬದುಕಿನ ಕ್ರಮ ಎನ್ನುವ ನಿಲುವುನೊಂದಿಗೆ ಸ್ತ್ರೀ ಕಲ್ಪನೆಯ ಬೆಳವಣಿಗೆಗಳು ಮುನ್ನೆಡೆದಿವೆ. ಈ ಹಿನ್ನೆಲೆಯಲ್ಲಿ ಸ್ತ್ರೀ ವಾದದ ಒಂದು ತಾತ್ವಿಕ ಚಿಂತನೆಯಾಗಿ ಬಲಗೊಳ್ಳಲು ಒದಗಿ ಬರುವ ಅವಕಾಶಗಳು ಮತ್ತು ಶೋಷಣೆಯ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನ ನಡೆಸಿದೆ.

ಮಹಿಳಾ ವಿಮೋಚನೆಯ ಸಾಧ್ಯತೆಗಳನ್ನು ತೀವ್ರ ಸೂಕ್ಷ್ಮಗಳಲ್ಲಿ ಕಲ್ಪಿಸಿರುವ ಸಿಮೊನ್ ದ ಬೊವಾ ಹೇಳುವ ಮಾತುಗಳು ಗಮನಾರ್ಹವಾಗಿವೆ. ನಿಮ್ಮ ಸಾಮಾಜಿಕತೆಯೇ ನಿಮ್ಮ ದಿಗ್ಬಂದನದ ಮೂಲ ಎಂಬುದು ಹೌದಾದರೆ ಸಾಮಾಜಿಕತೆಯನ್ನು ಬದಲಿಸುವುದೇ ನಿಮ್ಮ ವಿಮೋಚನೆಯ ಮತ್ತು ಅತ್ಯಂತಿಕ ಅಗತ್ಯ. ನಿಮ್ಮ ಸಮಯ ಮತ್ತು ಅವಕಾಶಗಳನ್ನು ಇಲ್ಲವಾಗಿಸುವ ಕುಟುಂಬದ 'ನಿಯಮಗಳೇ ಬದಲಾಯಿಸಲು ಓತ್ತಾಯಿಸುವುದೇ ನಿಮ್ಮ ಮೊದಲ ಅದ್ಯತೆಯಾಗಬೇಕು. ಮಹಿಳೆಯು ತನ್ನ ಖಾಸಗಿ ಸಮಯವನ್ನು ಸರಿಯಾಗಿ ನಿರ್ವಚಿಸಿಕೊಂಡು ಅದನ್ನು ಕುಟುಂಬದಲ್ಲಿ ಜಾರಿಗೊಳಿಸಬೇಕು. ನಾವು ನಮಗಾಗಿ ಬದುಕುತ್ತಿಲ್ಲ. ಹಾಗಾಗಿ ನಮಗಾಗಿ ಮಾತಾನಾಡುತ್ತಲೂ ಇಲ್ಲ ಎಂಬುದೇ ನಮ್ಮ ಮೊದಲ ತೊಡಕು, ಪುರುಷನನ್ನೇ ಪರಾಮರ್ಶನ ಬಿಂದುವಾಗಿ ಗ್ರಹಿಸಬೇಕಾದ ಸ್ಥಿತಿಯಲ್ಲಿ ನಮ್ಮ ದನಿ ಉಡುಗಿ ಹೋಗುವುದೇ ಸಹಜ.

ಸಮಾಜದಲ್ಲಿ ಎಂದೂ ಹೆಣ್ಣು ಅಧೀನಗಳಾಗಿಯೇ ಉಳಿದು ಬಂದಿದ್ದಾಳೆಂದು ಸಮಸ್ಯೆಯನ್ನು ಈ ಸಮಸ್ಯೆ ಪರಿಹಾರಗೊಳ್ಳಬೇಕೆಂಬ ಚಿಂತನೆಯನ್ನು ಸಮಾಜವಾದಿ ಚಿಂತಕರು ಪ್ರತಿಪಾದಿಸಿದ್ದು ಇತ್ತೀಚೆಗೆ, ಆದರೆ ಇದಕ್ಕೂ ಮುಂಚೆ ಸಮಸ್ಯೆಯನ್ನು ಗುರ್ತಿಸುವ ಪ್ರಯತ್ನ ನಡೆದಿರಲಿಲ್ಲ. ಅಂತಹ ಸ್ತ್ರೀಪುರುಷನಿಗೆ ಎದುರಾಗುವ, ಸ್ಥಾನಮಾನಗಳ ಬಗೆಗೆ ಸ್ಥಿತಿಗತಿಗಳ ಬಗೆಗೆ ಅಧ್ಯಯನ ನಡೆಸಲಾಗಿದೆ.

ಹೆಣ್ಣಿನ ದೇಹದ ಸಂಬಂಧದಲ್ಲಿ ಮಂಡನೆಯಾಗುತ್ತಿರುವ ಹೊಸ ಚಿಂತನೆಗಳ ಹಿನ್ನೆಲೆಯಲ್ಲಿ ಭಾರತೀಯ ಪಾರಂಪರಿಕ ಗ್ರಹಿಕೆಗಳನ್ನು ಮರಳಿ ವಿವೇಚಿಸಬೇಕಾದ ಅವಶ್ಯಕತೆಯಿದೆ. ಆ ನಿಟ್ಟಿನಲ್ಲಿ ೧೨ ನೇಯ ಶತಮಾನದಲ್ಲಿ ದೇಹದ ಬಗೆಗಿನ ಚರ್ಚೆಗಳು ನಡೆದಿವೆ. ಹೆಣ್ಣುತನ ಎಂಬುದು ನಿಸರ್ಗದತ್ತ ಫಲಿತವಾದ್ದರಿಂದ ಹೆಣ್ಣೆಂದರೆ ಇನ್ನೇನಾಗಲೂ ಸಾಧ್ಯವಿಲ್ಲ. ಹೆಣ್ಣು ದೇಹದ ಋತುಚಕ್ರ, ಬಸಿರು,

ಹೆರಿಗೆಗಳಂತಹ ಗುಣಲಕ್ಷಣಗಳನ್ನು ಅವಳ ದೌರ್ಬಲ್ಯಗಳೆಂದು ಬಿಂಬಿಸುವ ನಮ್ಮ ಸಮಾಜದಲ್ಲಿ ಇವತ್ತಿಗೆ ಅಲ್ಪಸ್ವಲ್ಪ ಬದಲಾವಣೆ ಆಗಿರುವುದನ್ನು ಕಾಣಬಹುದು. ಪ್ರಾಚೀನ ಸಾಹಿತ್ಯದಲ್ಲಿ ಹೆಣ್ಣನ್ನು ಶೃಂಗಾರಕ್ಕಾಗಿ ಬಳಸಿರುವುದು ಕಾಣುತ್ತದೆ. ಶೃಂಗಾರ ರಸವನ್ನು ಸೃಷ್ಟಿಸುವುದಕ್ಕಾಗಿ ಸ್ತ್ರೀಯ ದೇಹ ಸಮೃದ್ದಿಯನ್ನು ವರ್ಣಿಸಿದ್ದಾರೆ. ತನಗೆ ಇರುವ ಅಡೆತಡೆಗಳನ್ನು ಪ್ರಜ್ಞಾಪೂರ್ವಕವಾಗಿ ಗುರ್ತಿಸಿಕೊಳ್ಳುವ ಅದಕ್ಕೆ ಕಾರಣರಾದವರನ್ನು ಧೈರ್ಯದಿಂದ ಪ್ರಶ್ನಿಸುವ ಹಕ್ಕನ್ನು ಗಳಿಸುವ ಚಿಂತನೆಯನ್ನು ಬೆಳೆಸಿಕೊಳ್ಳುವುದು ಮುಖ್ಯವಾಗಿದೆ.

ಪ್ರಯೋಗಶೀಲತೆಯ ಪ್ರತೀಕವಾದ ಹುಟ್ಟಿಕೊಂಡ ವಚನಗಳು ಹೊಸ ಸಂವೇದನೆ, ಹೊಸ ಅಭಿವ್ಯಕ್ತಿಯನ್ನು ಸೃಷ್ಟಿಸಿದವು ಅಂತರ್ಜಾಲದ ಅನ್ವಯಗಳಾಗಿ ಅಕ್ಕನ ವಚನಗಳು ಕಾಣಿಸಿಕೊಂಡವು. ಭಕ್ತಿ ನೆಲೆಯನ್ನು ಕಂಡುಕೊಳ್ಳಲು ಸಹಕಾರಿಯಾದ ವಚನಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ವ್ಯಕ್ತಿ, ಸಮುದಾಯ, ಸಮಾಜಕ್ಕೆ ಸಂಬಂಧಿಸಿದಂತೆ ಅಕ್ಕ ಮತ್ತು ಗಿರಿಯಮ್ಮನ ವಚನ ಮತ್ತು ಕೀರ್ತನೆಗಳು ತಮ್ಮ ಮೂಲ ಭಕ್ತಿಯ ನೆಲೆಗಳನ್ನು, ಬೌದ್ಧಿಕ ಶಕ್ತಿ, ಕಲ್ಪನಾಶಕ್ತಿ, ಸಾಹಿತಿಗಳಿಗೆ ಸೃಜನಶೀಲತೆ ಬೆಳೆಸಲು ಸಾಹಿತ್ಯ ರಚನೆ ಅನುಕೂಲ ಕಲ್ಪಿಸಿದವು. ಸಮಾಜವನ್ನು ಕುರಿತ ಆಲೋಚನೆಗಳು, ಮಾನವೀಯ ಮೌಲ್ಯಗಳು  ಸಾಹಿತ್ಯ ಅಧ್ಯಯನದಲ್ಲಿ ಒಳಗೊಂಡ ಬಗೆಗೆ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಾಚೀನ, ಮಧ್ಯಕಾಲೀನ, ಆಧುನಿಕ ಕಾಲಘಟ್ಟದಲ್ಲಿ ಶಿಕ್ಷಣದ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ನಡೆಸಿದ್ದೇವೆ. ಅಯಾಯ ಸಂದರ್ಭಗಳಲ್ಲಿ ಮಹಿಳೆಯ ಸ್ಥಾನ ಮಾನಗಳಲ್ಲಿ ವಿಭಿನ್ನತೆ ಕಂಡುಬಂದಿದ್ದು ಬಂಧಮುಕ್ತಗೊಳ್ಳಲು ಹಲವು ರೀತಿಗಳಲ್ಲಿ ಪ್ರಯತ್ನಿಸಿದ್ದಾಳೆ, ಶಿಕ್ಷಣ ಪಡೆಯಲು ಲಿಂಗಭೇದದಿಂದಾಗಿ ದುರ ಉಳಿದಿದ್ದಾಳೆ. ಅಕ್ಕ ಮತ್ತು ಗಿರಿಯಮ್ಮಳು ಮೌಲ್ಯಧಾರಿತ ವಿಚಾರಗಳನ್ನು ಸಾಮಾನ್ಯರಿಗೆ ಅರ್ಥವಾಗುವ ಹಾಗೆ ಹೇಳಿದರು.  ಆಧ್ಯಾತ್ಮಿಕ ಶಿಕ್ಷಣ, ಲೌಕಿಕ ಶಿಕ್ಷಣ. ಅಲೌಕಿಕ ಶಿಕ್ಷಣಗಳ ಬಗ್ಗೆ ಹೊಸ ಶಿಕ್ಷಣ ವ್ಯವಸ್ಥೆಯನ್ನು ಪರಿಚಯಿಸಿದರು.

ಅಂತರ್ಜಾಲ ಮತ್ತು ಮಾಧ್ಯಮಗಳು ವೈಯಕ್ತಿಕ ಹಿತದೃಷ್ಟಿಯಿಂದ ಜಾಹೀರಾತು ಮನರಂಜನೆ ಕಾರ್ಯಕ್ರಮಗಳನ್ನು ಬಿತ್ತರಿಸಿತ್ತಿದ್ದವು. ಆಗಿನ ಕಾಲಕ್ಕೆ ವಚನ ಮತ್ತು ಕೀರ್ತನೆಗಳು ಜಾಹೀರಾತಿನ ತುಣುಕುಗಳಾಗಿ ಸರ್ವಕಾಲಕ್ಕೂ ಉಪಯುಕ್ತತೆಯನ್ನು ಸಾರುತ್ತವೆ.

ಸಾಮಾಜಿಕ ಪರಿಸ್ಥಿತಿಗೆ ಹೊಂದಿಕೊಳ್ಳಲಾರದೇ ಓತ್ತಡದಿಂದ ಹೊರಬಂದು ಬಾಲ್ಯತನದ ಬೇಸರವನ್ನು ಹೇಳಿಕೊಳ್ಳಲು ಪ್ರಕೃತಿಯನ್ನು ಬಳಸಿಕೊಂಡರು.ತಮ್ಮ ಆಂತರಂಗದ ನಿವೇದನೆಗಳನ್ನು ಅನಿಸಿಕೆಗಳನ್ನು ತಮ್ಮ ಸಾಹಿತ್ಯದ ಮೂಲಕ ಹೊರಚೆಲ್ಲಿದ್ದಾರೆ. ವಚನ ಮತ್ತು ಕೀರ್ತನೆಗಳಲ್ಲಿ ಗಿಡ, ಮರ ಪ್ರಾಣಿ, ಪಕ್ಷಿಗಳ ಬಳಕೆಯಾಗಿದ್ದು ವಿರಹದ ಭಕ್ತಿಯನ್ನು ಪ್ರಕೃತಿಯ ಮೂಲಕ ನಿವೇದಿಸಿಕೊಂಡಿದ್ದಾರೆ.

ಪ್ರಕೃತಿಯನ್ನು ಬಳಸಿಕೊಂಡಂತಹ ರೀತಿ,ಅಂತರ್ಜಾಲವಾಗಿ ಕೀರ್ತನೆ ವಚನಗಳು, ಮಾನವತಾವಾದಿ ಆಶಯಗಳನ್ನು ಇಟ್ಟುಕೊಂಡು,  ಸ್ತ್ರೀತನವನ್ನು ತಮ್ಮ ನೆಲೆಯಲ್ಲಿರಿಸಿಕೊಂಡು ಭಕ್ತಿಯ ಬಗೆಗೆ  ಸೈದಾಂತಿಕ ಭಾಷಾ ಶೈಲಿಯಲ್ಲಿ ವಚನ ಮತ್ತು ಕೀರ್ತನೆಗಳು ಮೂಡಿಬಂದಿವೆ.

ಹೆಣ್ಣಿನ ಸೃಜನಶೀಲತೆ ಮತ್ತು ಚಲನಶೀಲತೆಯನ್ನು ನಿರ್ಭಂಧಿಸುವ ಸಾಮಾಜಿಕ ಸಂದರ್ಭಗಳಲ್ಲಿಯೂ ಅವಳು ಆಕಸ್ಮಾತ್ತಾಗಿ ತನ್ನ ವಿಸ್ಮೃತಿಯಿಂದ ಹೊರಬಂದರೂ, ತನಗೆ ಲಭ್ಯವಾದಷ್ಟು

ಲೋಕಾನುಭವ ಮತ್ತು ಗ್ರಹಿಕೆಗಳನ್ನಾದರೂ ಏಕಾಂತವಾಗಿ ಪರಿಭಾವಿಸುವ ಅವಕಾಶಗಳನ್ನು ನೀಡಿದ್ದಾರೆ. ಹೆಣ್ಣಿನ ಮುಖ್ಯ ಸಾಂಸಾರಿಕ ಕಟ್ಟುಪಾಡುಗಳನ್ನು ಅವರು ಕಳಚಿ ಹಾಕಲು ಯತ್ನಿಸಿ ಸಮಾಜಮುಖಿಯಾದರು. ಕುಟುಂಬದ ಸದಸ್ಯತ್ವವನ್ನು ನಿರಾಕರಿಸದೇ ತನ್ನ ಅಸ್ತಿತ್ವವನ್ನು ಸ್ಥಾಪಿಸಿ, ಸೃಜನಶೀಲ ಅಧ್ಯಯನಕ್ಕೆ ಮಾರ್ಗತೋರಿದೆ. ಸೃಜನಶೀಲತೆ ಸ್ಥಾಪಿಸಲು ವರ್ಡ್ಸ್‌ವರ್ತ್ ಹೇಳಿದ ನೀರವತೆಯನ್ನು ಸಾಧಿಸಲು ಸೂಕ್ತವಾದ ಸಾಮಾಜಿಕ ವಾತಾವರಣ ಅಗತ್ಯವಿದೆ. ಆದರೆ ಇಂತಹ ಪ್ರಯತ್ನಕ್ಕೆ ಪ್ರತಿಯೊಬ್ಬರು ತೊಡಗಿಯೇ ಇರುತ್ತಾರೆ. ಈ ದಿಸೆಯಲ್ಲಿ ವೈಯಕ್ತಿಕ ನೆಲೆಯ ಪ್ರಯತ್ನಗಳಲ್ಲಿ ಪ್ರತಿಯೊಬ್ಬ ಲೇಖಕಿಯೂ ತೊಡಗಿಯೇ ಇರುತ್ತಾಳೆ. ಈ ಪ್ರಯತ್ನಕ್ಕೆ ಒಂದು ಸಮುದಾಯ ಶಕ್ತಿ ಪ್ರಾಪ್ತವಾಗುವಂತೆ ನಿಗಾವಹಿಸಿ ಅಕ್ಕಮಹಾದೇವಿ ಮತ್ತು ಹೆಳವನಕಟ್ಟೆ ಗಿರಿಯಮ್ಮ ನಮ್ಮ ಮಹಿಳಾ ಚಳುವಳಿಗಳಿಗೆ ಮುಖ್ಯ ದಾರಿದೀಪವಾಗಿದ್ದಾರೆ. ಈ ಚಿಂತನೆಗಳು ಕ್ರಿಯಾಶೀಲವಾಗುವ ಬಗೆಗಳನ್ನು ತೌಲನಿಕವಾಗಿ ಅಧ್ಯಯನಿಸಲು ಸಾಕ್ಷಿಯಾದವು.

## ಪರಾಮರ್ಶನ ಗ್ರಂಥಗಳು


೧. ಡಾ॥ ಎಲ್ ಬಸವರಾಜು, ಅಕ್ಕನ ವಚನಗಳು, ಗೀತಾ ಬುಕ್ ಹೌಸ್,ಮೈಸೂರು, ಮುದ್ರಣ, ೨೦೧೨

೨. ಎಂ ಚಂದ್ರ ಪೂಜಾರಿ, ಸಂಶೋಧನಾ ಜವಾಬ್ದಾರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೧೧

೩. ಡಾ॥ ಕೇಶವಶರ್ಮ ಕೆ, ಸ್ತ್ರೀವಾದಿ ಆಖ್ಯಾನ,ಸಾರಾ ಎಂಟರ್ ಪ್ರೈಸಸ್ ಪ್ರಕಾಶನ,ಮೈಸೂರು, ಮುದ್ರಣ, ೨೦೦೫

೪. ಟಿ ಕೆ ಇಂದುಬಾಯಿ, ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮುದ್ರಣ ೧೯೮೭

೫. ಡಾ॥ ನಟರಾಜ್ ಹುಳಿಯಾರ್, ಸ್ವಾತಂತ್ರ್ಯದ ಅಂತರ್ಜಲ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಮುದ್ರಣ, ೧೯೯೬

೬. ಪಾಲಾಕ್ಷ, ಭಾರತದ ಇತಿಹಾಸ, ಶಶಿ ಪ್ರಕಾಶನ, ತುಮಕೂರು, ಮುದ್ರಣ ೨೦೦೦

೭. ಬರಗೂರು ರಾಮಚಂದ್ರಪ್ಪ, ವಚನಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, ಮುದ್ರಣ ೧೯೯೩

೮. ಬರಗೂರು ರಾಮಚಂದ್ರಪ್ಪ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, ಮುದ್ರಣ ೧೯೯೩

೯. ಡಾ॥ ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಮುದ್ರಣ ೧೯೮೮

೧೦. ಮಂಗಳಾ ಪ್ರಿಯದರ್ಶಿನಿ, ಮಹಿಳಾ ಅಧ್ಯಯನ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ ಮುದ್ರಣ ೨೦೦೭

೧೧. ಮಹಾಶ್ವೇತದೇವಿ, ರುಡಾಲಿ, ಅನು-ಹೆಚ್ ಎಸ್ ಶ್ರೀಮತಿ, ಅಂಕಿತ ಪ್ರಕಾಶನ, ೨೦೦೫

೧೨. ಮರುಳ ಸಿದ್ದಪ್ಪ, ಭಕ್ತಿಪಂಥದಲ್ಲಿ ಸಮಾಜ ಕಾರ್ಯದ ಬೇರುಗಳು, ಪ್ರಗತಿ ಗ್ರಾಫಿಕ್ಸ್ ಬೆಂಗಳೂರು, ಮುದ್ರಣ ೧೯೯೪

೧೩. ಡಾ॥ ವೆಂಕಟಗಿರಿ ದಳವಾಯಿ, ನಾನು ನೀನು ಆನು, ಗೌತಮಪ್ರಕಾಶನ, ಬಾಗಲಕೋಟೆ, ಮುದ್ರಣ ೨೦೦೫

೧೪. ಸಾರಾ ಅಬೂಬಕ್ಕರ್, ಸಹನಾ, ಚಂದ್ರಗಿರಿ ಪ್ರಕಾಶನ, ಮುದ್ರಣ ೨೦೦೨

೧೫. ಎಚ್ ಎಸ್ ಶ್ರೀಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೬

೧೬. ಎಚ್ ಎಸ್ ಶ್ರೀಮತಿ, ಸ್ತ್ರೀವಾದಿ ಆಖ್ಯಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಮುದ್ರಣ ೨೦೦೯

୧୭. Belly millet, The Feminine mystiqe, NW Norton 1963

୧୮. Kate Millet, sexual politics, Double day, 1972

୧୯. Sigmund Fruied, Sexuality and the phychology of love, collier books, 1968

୨୦. Simone De beauvoir, The second sex, vintage books, 1974